



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 45

ಸಂಪುಟ: ೦೫ ಸಂಚಿಕೆ: ೭ | ಅಕ್ಟೋಬರ್ ೨೦೧೮ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್

Vol. 05 Issue 7 | October 2018 | Pages - 8 | A. Sub. - Rs. 20/- | Editor : Sri. B.R. Ravindranath

## ಬಿ.ಎಂ.ಶ್ರೀ. ಪ್ರತಿಷ್ಠಾನದ ನೂತನ ಅಧ್ಯಕ್ಷ ಡಾ. ಆರ್. ಲಕ್ಷ್ಮೀನಾರಾಯಣ



ದಿನಾಂಕ ಸೆಪ್ಟೆಂಬರ್ ೧೫ರಂದು ಬಿಎಂಶ್ರೀ ಪ್ರತಿಷ್ಠಾನದ ನೂತನ ಅಧ್ಯಕ್ಷ ಡಾ.ಲಕ್ಷ್ಮೀನಾರಾಯಣ ಅವರು ಡಾ. ಪಿ.ವಿ. ನಾರಾಯಣ ಅವರಿಂದ ಅಧಿಕಾರ ಸ್ವೀಕರಿಸಿದರು. ಗೌರವ ಅಧ್ಯಕ್ಷರಾದ ನಾಡೋಜ ಡಾ, ಎಂ.ಹೆಚ್ ಕೃಷ್ಣಯ್ಯ, ಶ್ರೀ ರವೀಂದ್ರನಾಥ, ಡಾ. ವಿಜಯಾ ಸುಬ್ಬರಾಜ್, ಡಾ. ಅನಿಲ್ ಕುಮಾರ್, ಶ್ರೀ ಡಿ.ನಂ. ವೆಂಕಟರಮಣಯ್ಯ, ಡಾ. ಬೈರಮಂಗಲ ರಾಮೇಗೌಡ, ಶ್ರೀ ಸಿ.ಕೆ. ರಾಮೇಗೌಡ, ಡಾ.ನಳಿನಿ ವೆಂಕಟೇಶ್, ಡಾ. ಹೆಚ್.ಎಸ್. ಎಂ. ಪ್ರಕಾಶ್ ಹಾಗೂ ಸಿಬ್ಬಂದಿ ವರ್ಗದವರಾದ ಶ್ರೀಮತಿ. ಪದ್ಮಾ, ಶ್ರೀಮತಿ. ವರಲಕ್ಷ್ಮಿ ಹಾಗೂ ಶ್ರೀಮತಿ ಗಾಯತ್ರಿ ಅವರುಗಳು ಡಾ. ಲಕ್ಷ್ಮೀನಾರಾಯಣ ಅವರಿಗೆ ಶುಭ ಕೋರಿದರು.

ಈ ಸಂದರ್ಭದಲ್ಲಿ ಮಾತನಾಡಿದ ಡಾ.ಲಕ್ಷ್ಮೀನಾರಾಯಣ ಅವರು ಪ್ರತಿಷ್ಠಾನಕ್ಕೆ ಇರುವ ಶ್ರೀಮಂತ ಹಾಗೂ ವಿದ್ವತ್ ಪೂರ್ಣ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗಲು ತಾವು ಶ್ರಮವಹಿಸುವುದಾಗಿ ಆಶ್ವಾಸನೆ ನೀಡಿದರು.

ದಿನಾಂಕ ೨೦೧೮ರ ಸೆಪ್ಟೆಂಬರ್ ೧೧ರಂದು ನಡೆದ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಡಾ. ಪಿ.ವಿ. ನಾರಾಯಣ ಅವರ ಕೋರಿಕೆಯಂತೆ ನಿವೃತ್ತಿ ಹೊಂದುವುದನ್ನು ಒಪ್ಪಿಕೊಂಡು ಅಧ್ಯಕ್ಷ ಪದವಿಯನ್ನು ಅಲಂಕರಿಸಲು ಡಾ.ಲಕ್ಷ್ಮೀನಾರಾಯಣ ಅವರೇ ಅತ್ಯಂತ ಸೂಕ್ತ ವ್ಯಕ್ತಿಯೆಂದು ಅಭಿಪ್ರಾಯಪಟ್ಟು ಸರ್ವಾನುಮತದಿಂದ ಅವರನ್ನು ಆಯ್ಕೆ ಮಾಡಲಾಯಿತು. ಡಾ. ಲಕ್ಷ್ಮೀನಾರಾಯಣ ಅವರು ೧೫ನೇ ಸೆಪ್ಟೆಂಬರ್ ೨೦೨೧ ವರೆಗೆ ಅಧ್ಯಕ್ಷ ಪದವಿಯನ್ನು ಅಲಂಕರಿಸಿರುತ್ತಾರೆ.

## ಡಾ. ಪಿ.ವಿ. ನಾರಾಯಣ ಅವರಿಗೆ ಆತ್ಮೀಯ ಬೀಳ್ಕೊಡುಗೆ



ಸೆಪ್ಟೆಂಬರ್ ೧೫ರಂದು ಬಿಎಂಶ್ರೀ ಪ್ರತಿಷ್ಠಾನದ ಅಧ್ಯಕ್ಷರಾಗಿ ಐದೂವರೆ ವರ್ಷಗಳ ಕಾಲ ಅವಿರತ ಸೇವೆ ಸಲ್ಲಿಸಿ ನಿವೃತ್ತಿಗೊಂಡ ಡಾ. ಪಿ.ವಿ. ನಾರಾಯಣ ಅವರಿಗೆ ಆತ್ಮೀಯ ಬೀಳ್ಕೊಡುಗೆ ನೀಡಲಾಯಿತು. ಇತಿಹಾಸ ಅಕಾಡೆಮಿಯ ವತಿಯಿಂದ ಡಾ. ದೇವರಕೊಂಡಾರೆಡ್ಡಿ, ಡಾ.ದೇವರಾಜಸ್ವಾಮಿ, ಡಾ, ನಳಿನಿ ವೆಂಕಟೇಶ್ ಹಾಗೂ ಶ್ರೀ ಗುರುಪ್ರಸಾದ್ ಅವರುಗಳು ಡಾ. ಪಿ.ವಿ. ನಾರಾಯಣ ಅವರಿಗೆ ಶುಭಕೋರಿದರು. ಗಮಕ ಕಲಾ ಪರಿಷತ್ತು ವತಿಯಿಂದ ಅಧ್ಯಕ್ಷೆ ಶ್ರೀಮತಿ ಗಂಗಮ್ಮ ಕೇಶವಮೂರ್ತಿ ಹಾಗೂ ಇತರ ಪದಾಧಿಕಾರಿಗಳು ಡಾ. ಪಿ.ವಿ. ನಾರಾಯಣ ಅವರಿಗೆ ಶುಭಕೋರಿದರು.

ಗೌರವ ಅಧ್ಯಕ್ಷರಾದ ನಾಡೋಜ ಡಾ, ಎಂ.ಹೆಚ್ ಕೃಷ್ಣಯ್ಯ ಅವರು ಡಾ. ಪಿ.ವಿ. ನಾರಾಯಣ ಅವರು ಸಲ್ಲಿಸಿದ ಸೇವೆಯನ್ನು ಶ್ಲಾಘಿಸಿ ಸರಳವಾಗಿ ಸನ್ಮಾನಿಸಿ ಶುಭ ಕೋರಿದರು. ಈ ಬೀಳ್ಕೊಡುಗೆ ಕಾರ್ಯಕ್ರಮದಲ್ಲಿ ಶ್ರೀ ರವೀಂದ್ರನಾಥ, ಡಾ. ವಿಜಯಾ ಸುಬ್ಬರಾಜ್, ಡಾ. ಅನಿಲ್ ಕುಮಾರ್, ಶ್ರೀ ಡಿ.ನಂ. ವೆಂಕಟರಮಣಯ್ಯ, ಡಾ. ಬೈರಮಂಗಲ ರಾಮೇಗೌಡ, ಶ್ರೀ ಸಿ.ಕೆ.ರಾಮೇಗೌಡ ಹಾಗೂ ಡಾ.ನಳಿನಿ ವೆಂಕಟೇಶ್ ಅವರುಗಳು ಭಾಗವಹಿಸಿದರು. ಸಿಬ್ಬಂದಿ ವರ್ಗದವರಾದ ಶ್ರೀಮತಿ. ಪದ್ಮಾ, ಶ್ರೀಮತಿ. ವರಲಕ್ಷ್ಮಿ ಹಾಗೂ ಶ್ರೀಮತಿ ಗಾಯತ್ರಿ ಅವರುಗಳು ಡಾ. ಪಿ.ವಿ. ನಾರಾಯಣ ಅವರಿಗೆ ಶುಭ ಕೋರಿದರು.



**ಚಂದಾ ವಿವರಗಳು**

ವಾರ್ಷಿಕ ಚಂದಾ
ರೂ. ೨೦/–

ಐದು ವರ್ಷಗಳ ಚಂದಾ
ರೂ. ೧೦೦/–

ವಿಳಾಸ

ಬಿ.ಎಂ.ಶ್ರೀ. ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org

ಕಛೇರಿ ಸಮಯ:
ಮಧ್ಯಾಹ್ನ 12–30ರಿಂದ ಸಂಜೆ 7–30ಗಂಟೆ.
ವಾರದ ರಜೆ: ಮಂಗಳವಾರ

# ಸಂಪಾದಕೀಯ

ನಾವು ಚಲನ ಚಿತ್ರ ನೋಡಲು ಹೋಗುವ ಮುನ್ನಚಿತ್ರದ ಬಗ್ಗೆ ಬಂದಿರುವ ವಿಮರ್ಶೆಗಳನ್ನು ಓದಿ ಚಿತ್ರ ಚೆನ್ನಾಗಿದೆ ಎಂಬ ಭಾವನೆ ಮೂಡಿದಾಗ ಮಾತ್ರ ಚಲನ ಚಿತ್ರ ನೋಡಲು ಪ್ರಯಾಸ ಪಡುತ್ತೇವೆ. ಅದೇ ರೀತಿಯಲ್ಲಿ ಯಾವುದೇ ಪುಸ್ತಕ ಓದುವ ಮುನ್ನ ಆ ಪುಸ್ತಕದ ಬಗ್ಗೆ ಪ್ರಕಟವಾಗಿರುವ ವಿಮರ್ಶೆಗಳನ್ನು ಓದಿ ನಂತರ ಮುನ್ನುಡಿ ಹಾಗೂ ಬೆನ್ನುಡಿಗಳನ್ನು ಓದಿದ ನಂತರ ಪುಸ್ತಕವನ್ನು ಓದುವುದು ಬಹುಜನರ ಪದ್ಧತಿ. ಇದೇ ಅಭ್ಯಾಸವನ್ನು ನಾಟಕ ನೋಡುವ ಮುನ್ನ ಸಂಗೀತ ಕಚೇರಿಗೆ ಹೋಗುವ ಮುನ್ನ ಪಾಲಿಸುತ್ತೇವೆ.

ಈ ರೀತಿಯ ಅಭ್ಯಾಸದಿಂದ ನಮಗಾಗುವ ಅನುಕೂಲಗಳೆಂದರೆ ಈ ಕಾರ್ಯಕ್ರಮಗಳಿಂದ ಏನನ್ನು ನಿರೀಕ್ಷಿಸಬಹುದು ಎಂಬುದರ ಬಗ್ಗೆ ಅಂದಾಜಿಸುವುದು, ವಿಮರ್ಶಕರು ನೋಡಿರುವುದನ್ನು ನಾವೂ ಗಮನಿಸುವುದು ಹಾಗೂ ನಮ್ಮ ಸಮಯ ಹಾಗೂ ಹಣದ ಸದ್ಬಳಕೆಯಾಗುವುದನ್ನು ಖಚಿತಪಡಿಸಿಕೊಳ್ಳುವುದು. ಓದುಗರ ಅನುಕೂಲಕ್ಕಾಗಿ ಬಹಳಷ್ಟು ವಿಮರ್ಶಕರು ತಾರಾ ಸಂಖ್ಯೆಯನ್ನು ಸೂಚಿಸಿ ತಮ್ಮ ಒಟ್ಟಾರೆ ಅಭಿಪ್ರಾಯವನ್ನು ಸಂಕ್ಷಿಪ್ತವಾಗಿ ತಿಳಿಸುತ್ತಾರೆ.

ವಿಶ್ವಾದ್ಯಂತ ಉಪನ್ಯಾಸಗಳನ್ನು ನೀಡುವ ಹಾಗೂ ಕೇಳುವ ಜನರ ಸಂಖ್ಯೆಅಗಾಧ. ಉಪನ್ಯಾಸಗಳನ್ನು ಸಂಘಟಿಸಲು ಬೇಕಾಗುವ ಹಣ ಹಾಗೂ ಮಾನವ ಸಂಪನ್ಮೂಲಗಳು ಅಪಾರ.ಹೀಗೆ ಸಂಘಟಿಸಿರುವ ಉಪನ್ಯಾಸಗಳನ್ನು ಆಲಿಸಲು ಬರುವವರ ಸಂಖ್ಯೆಯೂ ಬಹು ಗಾತ್ರದ್ದು. ಎಷ್ಟೋ ಬಾರಿ ಕೆಲ ಮಹಾನ್ ವ್ಯಕ್ತಿಗಳು ನೀಡು ಉಪನ್ಯಾಸಗಳನ್ನು ಆಲಿಸಲೆಂದೇ ವೈಯಕ್ತಿಕ ತೊಂದರೆಗಳನ್ನೂ ಬದಿಗೊತ್ತಿ ಹಣ ಹಾಗೂ ಸಮಯವನ್ನು ಮೀಸಲಿಡುವ ಜನರ ಸಂಖ್ಯೆ ಕಡಿಮೆಇಲ್ಲ. ಅದೇ ರೀತಿಯಲ್ಲಿ ಬಹಳಷ್ಟು ಹಣ ವೆಚ್ಚ ಮಾಡಿ ಶ್ರಮ ವಹಿಸಿ ಸಂಘಟಿಸಿದ್ದ ಕಾರ್ಯಕ್ರಮಗಳಲ್ಲಿ ಉಪನ್ಯಾಸಕಾರರು ಸಭಿಕರಿಗೆ ನಿರಾಸೆ ಉಂಟುಮಾಡುವುದೂ ಸರ್ವೇ ಸಾಮಾನ್ಯ. ಕೆಲವು ಬಾರಿ ಉಪನ್ಯಾಸದ ವಿಷಯ ವಸ್ತು ಬಗ್ಗೆ ಹೆಚ್ಚು ಗಮನ ನೀಡದೇ ಉಪನ್ಯಾಸಕಾರರ ಮಾತಿನ ವೈಖರಿಗೆ ಹೆಚ್ಚು ಜನ ಮಾರುಹೋಗುತಾರೆ. ಎಷ್ಟೋ ಬಾರಿ ಭಾಷಣಕಾರರು ಸಮಯದ ಅರಿವು ಇಲ್ಲದೇ ಸಭಿಕರ ಸಮಯಕ್ಕೆ ಬೆಲೆ ಕೊಡದೇ ಮೌಲ್ಯವಿಲ್ಲದ ಅರ್ಥಹೀನ ಮಾತುಗಳನ್ನು ಲಂಬಿಸಿ ಸಂಘಟಕರಿಗೂ ಸಭಿಕರಿಗೂ ತೊಂದರೆ ಮಾಡುತಾರೆ. ಚಿತ್ತಾರದ ಬಣ್ಣವನ್ನೆಲ್ಲ ಮಸಿ ನುಂಗಿತು ಎನ್ನುವ ಹಾಗೆ ಸಂಘಟಕರ ಶ್ರಮವೆಲ್ಲವನ್ನೂ ಉಪನ್ಯಾಸಕಾರರು ವ್ಯರ್ಥಮಾಡಿರುವ ಉದಾಹರಣೆಗಳೂ ಉಂಟು.

ಈವರೆಗೆ ಯಾವ ವಿದ್ವಾಂಸರು ನೀಡುವ ಉಪನ್ಯಾಸ ಉತ್ತಮವಾಗಿರುತ್ತದೆ ಯಾರ ಉಪನ್ಯಾಸ ಸಭಿಕರಿಗೆ ಆಸಕ್ತಿ ಮೂಡಿಸಲಾರದು ಎಂಬುದನ್ನು ಹಿಂದಿನ ಅನುಭವಗಳನ್ನು ಆಧರಿಸಿ ಜನರು ಭಾಗವಹಿಸುವುದು ವಾಡಿಕೆಯಾಗಿರುತ್ತದೆ.

ಈಗ ಸಂಘಟನಾ ವೆಚ್ಚ ಗಣನೀಯವಾಗುತ್ತಲಿರುವುದರಿಂದ, ಸಂಘಟಕರು ತಮ್ಮ ಗೌರವ ಕಾಪಾಡಿಕೊಳ್ಳಬೇಕಾಗುವದರಿಂದೆ ಹಾಗೂ ಸಭಿಕರ ಸಮಯ ಶ್ರಮ ಹಾಗೂ ವೆಚ್ಚಗಳಿಗೆ ಗೌರವ ನೀಡುವುದು ಅತ್ಯಗತ್ಯವಾಗಿರುವುದರಿಂದ ಉಪನ್ಯಾಸಕಾರರ ಮೌಲ್ಯಮಾಪನ ಮಾಡುವ ಅಗತ್ಯ ಎದ್ದು ಕಾಣುತ್ತಿದೆ.

ಜೊತೆಗೆ, ಉಪನ್ಯಾಸಕಾರರಿಗೆ ನೀಡಲಾಗುವ ಸಂಭಾವನೆ ಸಂಬಂಧಿತ ಯಾವುದೇ ಮಾನದಂಡಗಳಿರುವುದಿಲ್ಲ. ವಿಶೇಷವಾಗಿ ಸಿದ್ಧತೆಗಳನ್ನು ನಡೆಸಿಕೊಂಡು ಬರುವ ಉಪನ್ಯಾಸಕಾರರಿಗೂ ಚರ್ವಿತಚರ್ವಣ ಮಾತುಗಳನ್ನೇ ಆಡುವವರಿಗೂ ಒಂದೇ ರೀತಿಯ ಸಂಭಾವನೆ ನೀಡಬೇಕಾಗುವ ಪ್ರಸಂಗಗಳು ಸರ್ವೇ ಸಾಮಾನ್ಯ.

ಉಪನ್ಯಾಸಕಾರರ ಮೌಲ್ಯ ಮಾಪನ ಮಾಡಲು ಸೂಕ್ತವಾದ ಪ್ರತ್ಯೇಕ ಮಾನದಂಡಗಳನ್ನು ರೂಪಿಸುವ ಅಗತ್ಯವಿದೆ. ಈ ಮಾನದಂಡಗಳನ್ನು ಬಳಸಿಕೊಂಡು ಉಪನ್ಯಾಸಕಾರರ "ರೇಟಿಂಗ್" ನ್ನು ನಿಗದಿಸಿ ಅದರ ಆಧಾರದ ಮೇಲೆ, ಉಪನ್ಯಾಸಕಾರರಿಗೆ ನೀಡಲಾಗುವ ವಿಷಯ ವಸ್ತು, ಉಪನ್ಯಾಸದ ಅವಧಿ ಹಾಗೂ ಸಂಭಾವನೆ ಇವುಗಳನ್ನು ನಿಗದಿಪಡಿಸಬಹುದು.

ಈ ಬಗ್ಗೆಯ ಸಂಶೋಧನೆಗಳು ಆಗಿರುವ ಬಗ್ಗೆ ವರದಿಯಾಗಿರುವುದಿಲ್ಲ.

ನೂತನ ಅಧ್ಯಕ್ಷರಾದ ಡಾ.ಲಕ್ಷ್ಮೀನಾರಾಯಣ ಅವರಿಗೆ ಪ್ರತಿಷ್ಠಾನದ ಅಭಿವೃದ್ಧಿಯ ಬಗ್ಗೆ ಬಹಳಷ್ಟು ರೀತಿಯ ಆಲೋಚನೆಗಳಿವೆ. ಬರಲಿರುವ ತಿಂಗಳುಗಳಲ್ಲಿ ಈಗಿರುವ ಚಟುವಟಿಕೆಗಳ ಜೊತೆಯಲ್ಲಿ ಹಲವಾರು ವೈವಿದ್ಯಮಯ ವಿದ್ವತ್ ಪೂರ್ಣ ಕಾರ್ಯಕ್ರಮಗಳನ್ನು ನಡೆಸುವ ಯೋಜನೆಗಳನ್ನು ರೂಪಿಸುತ್ತಿದ್ದೇವೆ.

**ಬಿ.ಆರ್ ರವೀಂದ್ರನಾಥ್**
**ಸಂಪಾದಕರು**

**ಅಭಿನಂದನೆಗಳು**

## ಡಾ. ಅನಿಲ್ ಕುಮಾರ್ ಅವರಿಗೆ ಕೆಂಪೇಗೌಡ ಪ್ರಶಸ್ತಿ



ಬಿ.ಎಂ.ಶ್ರೀ ಪ್ರತಿಷ್ಠಾನದ ಕೋಶಾಧ್ಯಕ್ಷರಾದ ಡಾ.ಅನಿಲ್ ಕುಮಾರ್ ಅವರು ಶಿಕ್ಷಣ ಕ್ಷೇತ್ರದಲ್ಲಿ ನೀಡಿರುವ ಸೇವೆಯನ್ನು ಗುರುತಿಸಿ ಬೆಂಗಳೂರು ಬೃಹತ್ ಮಹಾನಗರ ಪಾಲಿಕೆಯು ಈ ವರ್ಷ ಪ್ರತಿಷ್ಠಿತ ಕೆಂಪೇಗೌಡ ಪ್ರಶಸ್ತಿಯನ್ನು ನೀಡಿ ಅವರನ್ನು ಗೌರವಿಸಿರುತ್ತದೆ. ಡಾ. ಅನಿಲ್ ಕುಮಾರ್ ಅವರಿಗೆ ನಮ್ಮೆಲ್ಲರ ಅಭಿನಂದನೆಗಳು.

**ಅಭಿನಂದನೆಗಳು**



## ಡಾ.ಎಂ.ಜಿ. ನಾಗರಾಜ್ ಅವರಿಗೆ ಕೆಂಪೇಗೌಡ ಪ್ರಶಸ್ತಿ

ಬಿ.ಎಂ.ಶ್ರೀ ಪ್ರತಿಷ್ಠಾನದ ಸಕ್ರಿಯ ಸದಸ್ಯರು ಹಾಗೂ ಖ್ಯಾತ ವಿದ್ವಾಂಸರಾದ ಡಾ.ಎಂ.ಜಿ. ನಾಗರಾಜ್ ಅವರಿಗೆ ಬೆಂಗಳೂರು ಬೃಹತ್ ಮಹಾನಗರ ಪಾಲಿಕೆಯು ಈ ವರ್ಷ ಪ್ರತಿಷ್ಠಿತ ಕೆಂಪೇಗೌಡ ಪ್ರಶಸ್ತಿಯನ್ನು ನೀಡಿ ಅವರನ್ನು ಗೌರವಿಸಿರುತ್ತದೆ. ಡಾ. ಎಂ.ಜಿ. ನಾಗರಾಜ್

## ಅಕ್ಟೋಬರ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಟಿ.ಎಸ್. ವೆಂಕಣ್ಣಯ್ಯ | ೧-೧೦-೧೮೮೫ |
| ಬಸರಾಜ ಕಟ್ಟಿಮನಿ | ೫-೧೦-೧೯೧೯ |
| ಎಲ್. ಬಸವರಾಜು | ೭-೧೦-೧೯೧೯ |
| ಶಿವರಾಮ ಕಾರಂತ | ೧೦-೧೦-೧೯೦೨ |
| ಕೆರೂರ ವಾಸುದೇವಾಚಾರ್ಯ | ೧೫-೧೦-೧೮೬೬ |
| ಡಿಎಲ್ ನರಸಿಂಹಾಚಾರ್ಯ | ೨೭-೧೦-೧೯೦೬ |
| ಚನ್ನಪ್ಪ ಉತ್ತಂಗಿ | ೨೮-೧೦-೧೮೮೧ |

## ಅಕ್ಟೋಬರ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಡಿವಿಜಿ | ೭-೧೦-೧೯೭೫ |
| ಡಾ.ಆ.ನೇ. ಉಪಾಧ್ಯ | ೯-೧೦-೧೯೭೫ |
| ಪು.ತಿ.ನ | ೧೩-೧೦-೧೯೯೮ |
| ಶ್ರೀರಂಗ | ೧೭-೧೦-೧೯೮೪ |
| ಚದುರಂಗ ಎಂ. ಸುಬ್ರಮಣ್ಯರಾಜು | ೧೯-೧೦-೧೯೯೮ |
| ತಿರುಮಲೆ ತಾತಾಚಾಯ್ಯ ಶರ್ಮಾ | ೨೦-೧೦-೧೯೭೩ |
| ಬಸವರಾಜ ಕಟ್ಟಿಮನಿ | ೨೩-೧೦-೧೯೮೯ |
| ದೇವುಡು | ೨೪-೧೦-೧೯೬೨ |
| ವ್ಯಾಕರಣ ತೀರ್ಥ ಚಂದ್ರಶೇಖರ ಶಾಸ್ತ್ರಿಗಳು | ೨೪-೧೦-೧೯೯೭ |
| ಪಂಜೆಮಂಗೇಶರಾವ್ | ೨೪-೧೦-೧೯೩೭ |
| ದ.ರಾ.ಬೇಂದ್ರೆ | ೨೬-೧೦-೧೯೮೬ |
| ಎಸ್.ವಿ. ಪರಮೇಶ್ವರ ಭಟ್ಟ | ೨೭-೧೦-೨೦೦೦ |
| ಆನಂದಕಂದ ಬೆಟಗೇರಿ ಕೃಷ್ಣಶರ್ಮಾ | ೩೦-೧೦-೧೯೮೨ |

**ಕಿರು ಪರಿಚಯ**

# ಡಾ. ಆರ್. ಲಕ್ಷ್ಮೀನಾರಾಯಣ



ಡಾ. ಆರ್.ಲಕ್ಷ್ಮೀನಾರಾಯಣ ಅವರು ೧೯೭೧ ರಿಂದ ೨೦೦೬ರವರೆಗೆ ವಿವಿಧ ಸರ್ಕಾರಿ ಕಾಲೇಜುಗಳಲ್ಲಿ ಕನ್ನಡ ಅಧ್ಯಾಪಕ, ಪ್ರಾಧ್ಯಾಪಕ ಮತ್ತು ಪ್ರಿನ್ಸಿಪಾಲರಾಗಿ ಸೇವೆ ಸಲ್ಲಿಸಿ, ೨೦೦೬ ಮೇ ಯಿಂದ ೨೦೦೭ರ ಡಿಸೆಂಬರ್ ವರೆಗೆ ಧಾರವಾಡದಲ್ಲಿ ಇಲಾಖೆಯ ಜಂಟಿ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ. ಡಾ.ಪಿ.ವಿ.ನಾರಾಯಣ ಅವರ ಮಾರ್ಗದರ್ಶನದಲ್ಲಿ ೨೦೦೪ರಲ್ಲಿ 'ವಕ್ರೋಕ್ತಿ ಜೀವಿತ– ಒಂದು ಅಧ್ಯಯನ' ಎಂಬ ಮಹಾಪ್ರಬಂಧಕ್ಕೆ ಬೆಂಗಳೂರು ವಿಶ್ವವಿದ್ಯಾಲಯದ ಪಿ.ಎಚ್.ಡಿ. ಪದವಿ ಪಡೆದಿರುತ್ತಾರೆ.ಇಂಗ್ಲಿಷ್ ಮತ್ತುಹಿಂದಿಯಿಂದ ಅನುವಾದ ಮಾಡುವುದರಲ್ಲಿ ನಿರತರು.ಆರು ವಿಮರ್ಶಾ ಕೃತಿಗಳು, ಹನ್ನೊಂದು ಅನುವಾದಿತ ಕೃತಿಗಳು ಹಾಗೂ ಮೂರು ಸಂಪಾದಿತ ಕೃತಿಗಳು ಪ್ರಕಟಗೊಂಡಿವೆ. ಮುಖ್ಯವಾದ ಕೆಲವು ಸ್ವತಂತ್ರ ಮತ್ತು ಅನುವಾದಿತ ಕೃತಿಗಳು: ಮಾಸ್ತಿ, ಪರಮೇಶ್ವರಭಟ್ಟ, ಚೆಲುವಿನ ನೆಲೆಗಳ ಹಾದಿಯಲ್ಲಿ, ಉರಿಲಿಂಗಪೆದ್ದಿ. ವಾಙ್ಮಯ ವಿವೇಕ, ವಕ್ರೋಕ್ತಿ ಮತ್ತು ಶೈಲಿಶಾಸ್ತ್ರದ ಪರಿಕಲ್ಪನೆಗಳು, ಪಾಲಿ–ಕನ್ನಡ ಪದಕೋಶ.

ಪ್ರಶಸ್ತಿಗಳು: ಕೇಂದ್ರ ಸಾಹಿತ್ಯ ಅಕಾಡೆಮಿ ಅನುವಾದ ಪ್ರಶಸ್ತಿ, ೨೦೦೪ರ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ೨೦೧೩ರ ಕರ್ನಾಟಕ ಸಾಹಿತ್ಯ ಅಕಡೆಮಿ ಪ್ರಶಸ್ತಿ, ಗೊರೂರು ಸಾಹಿತ್ಯ ಪ್ರಶಸ್ತಿ ಹಾಗೂ ರಾಜ್ಯ ಸರ್ಕಾರದಿಂದ ಉತ್ತಮ ಕಾಲೇಜು ಶಿಕ್ಷಕ ಪ್ರಶಸ್ತಿ. ಸಂಸ್ಕೃತದಿಂದ ಅನುವಾದಿಸಿದ " ಕನ್ನಡ ವಕ್ರೋಕ್ತಿಜೀವಿತ" ಕೃತಿಗೆ ೨೦೦೭ರ ಕೇಂದ್ರ ಸಾಹಿತ್ಯ ಅಕಾಡೆಮಿ ಅನುವಾದ ಪ್ರಶಸ್ತಿ, ಅದೇಕೃತಿಗೆ ೨೦೦೪ರ ರಾಜ್ಯ ಸಾಹಿತ್ಯ ಅಕಾಡೆಮಿ ಶ್ರೇಷ್ಠ ಸೃಜನೇತರ ಅನುವಾದ ಪ್ರಶಸ್ತಿ, 'ಬೇಗುದಿ' ಕೃತಿಗೆ ೨೦೧೩ರ ರಾಜ್ಯ ಸಾ. ಅಕಾಡೆಮಿ ಶ್ರೇಷ್ಠ ಸೃಜನಶಿಲ ಅನುವಾದ ಪ್ರಶಸ್ತಿ ಮತ್ತು 'ಆಹ್ಲಾದ' ಕೃತಿಗೆ ಗೊರೂರು ಸಾಹಿತ್ಯ ಪ್ರಶಸ್ತಿ.

## ಅಕ್ಟೋಬರ್ ೨೦೧೮ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

**ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಪ್ರತಿಷ್ಠಾನ**



**೦೪-೧೦-೨೦೧೮ ಗುರುವಾರ ಸಂಜೆ – ೬-೦೦ಗಂಟೆಗೆ**

'ಸಾಹಿತ್ಯ ವಿಹಾರ'-೮

ಸಾಕ್ಷ್ಯಚಿತ್ರ ಪ್ರದರ್ಶನ



**೨೦-೧೦-೨೦೧೮ ಶನಿವಾರ ಸಂಜೆ– ೬-೦೦ ಗಂಟೆಗೆ**

"ಅಕ್ಕರಗೊಟ್ಟಿ"-೪೩

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ :'ಕನ್ನಡ ಸಂವರ್ಧನೆ ಮತ್ತು ಆಧುನಿಕ ಆಶೋತ್ತರಗಳು'

ಚಾಲನೆ ನೀಡುವವರು : ಶ್ರೀಮತಿ ಸಿ.ವಿ.ಶೈಲಜ

ಉಪನ್ಯಾಸಕರು, ಈಸ್ಟ್ ಪಾಯಿಂಟ್ ಕಾಲೇಜು ಯಲಹಂಕ.



**೨೪-೧೦-೨೦೧೮ ಬುಧವಾರ ಸಂಜೆ ೪-೦೦ ಗಂಟೆಗೆ**

ಸಾಹಿತ್ಯ ಸಂಚಲನ

ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ

ಕರ್ನಾಟಕ ಲೇಖಕಿಯರ ಸಂಘದ ಕಾರ್ಯಕ್ರಮ

ಮುಖ್ಯ ಅತಿಥಿ : ಶ್ರೀ ಎಂ. ಜಯಕುಮಾರ್ ಮರಿಯಪ್ಪ

ಸಂಪಾದಕರು ಮತ್ತು ವಿಷಯ ತಜ್ಞರು

ಅಜ಼ೀಂ ಪ್ರೇಮ್‌ಜಿ ವಿಶ್ವವಿದ್ಯಾಲಯ, ಬೆಂಗಳೂರು

ಉಪನ್ಯಾಸದ ವಿಷಯ : ಜೀವನ್ಮುಖಿ ಭಾಷಾಂತರ

**೨೯-೧೦-೨೦೧೮ ಸೋಮವಾರ ಸಂಜೆ ೬-೦೦ಗಂಟೆಗೆ**

ಎಂ.ಎ.ರಾಮಾನುಜಯ್ಯಂಗಾರ್ ,ಬಿ.ರಾಮಸ್ವಾಮಿ ಬೇಟೆರಾಯದೀಕ್ಷಿತ್ ,

ಎಸ್. ಶ್ರೀಕಂಠಯ್ಯ ದತ್ತಿ ಉಪನ್ಯಾಸ ಕಾರ್ಯಕ್ರಮ

ಉಪನ್ಯಾಸಕರು : ಡಾ. ಕೆ. ಮರುಳಸಿದ್ಧಪ್ಪ

ಖ್ಯಾತ ವಿದ್ವಾಂಸರು ಹಾಗೂ ಅಧ್ಯಕ್ಷರು, ಕುವೆಂಪು ಭಾಷಾಭಾರತಿ ಪ್ರಾಧಿಕಾರ

ವಿಷಯ : ಶ್ರೀರಂಗರ ನಾಟಕಗಳು

## ಪ್ರಕಟಣೆ

ಬಿ.ಎಂ.ಶ್ರೀ.ಪ್ರತಿಷ್ಠಾನವು ಮೂರು ತಿಂಗಳ ಅವಧಿಯ 'ಹಳಗನ್ನಡ ಅಧ್ಯಯನ' ತರಗತಿಗಳನ್ನು ಆರಂಭಿಸಲು ತೀರ್ಮಾನಿಸಿದೆ. ವ್ಯಾಸಂಗವು ಆರು ತಿಂಗಳಿನ ಅವಧಿಯದಾಗಿದ್ದು, ತರಗತಿಗಳು ೨೦೧೭ರ ನವೆಂಬರ್ ಮೊದಲ ವಾರದಲ್ಲಿ ಆರಂಭವಾಗುತ್ತವೆ. ತರಗತಿಗಳು ವಾರದಕೊನೆಯಲ್ಲಿ ಸಂಜೆ ವೇಳೆ ನಡೆಯುತ್ತವೆ. ನುರಿತ ಹಾಗೂ ಪ್ರಖ್ಯಾತರಾದ ವಿದ್ವಾಂಸರು ತರಗತಿಗಳನ್ನು ನಡೆಸಿಕೊಡಲು ಒಪ್ಪಿದ್ದಾರೆ. ಎಲ್ಲ ಆಸಕ್ತರಿಗೂ ಅವಕಾಶವಿದೆ. ನೋಂದಣಿಗಾಗಿ ಮತ್ತು ಹೆಚ್ಚಿನ ವಿವರಗಳಿಗಾಗಿ ಪ್ರತಿಷ್ಠಾನದ ಕಚೇರಿಯ ಅವಧಿಯಲ್ಲಿ (ಮಧ್ಯಾಹ್ನ ೧೨-೩೦ ರಿಂದ ಸಂಜೆ ೭-೦೦ ಗಂಟೆ) ಖುದ್ದಾಗಿಯಾಗಲೀ ದೂರವಾಣಿ ಸಂಖ್ಯೆ ೨೬೬೧೫೮೭೭ ಮೂಲಕವಾಗಲೀ ಸಂಪರ್ಕಿಸಬಹುದು.

# ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳು

## ೦೭-೦೯-೨೦೧೮ "ಅಕ್ಕರಗೊಟ್ಟಿ"-೪೨

### ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ: ಕುಮಾರವ್ಯಾಸ ಭಾರತದ ಅರಣ್ಯ ಪರ್ವದಲ್ಲಿ ಧರ್ಮವ್ಯಾಧನ ಕಥೆ.

ಚಾಲನೆ ನೀಡಿದವರು : ಶ್ರೀ ಕೆ.ಎನ್. ಭಗವಾನ್ (ನಿವೃತ್ತ ಇಂಜಿನಿಯರ್ ಮತ್ತು ಲೇಖಕರು)



ಶ್ರೀ ಬಿ.ಎಸ್. ಗುರುಪ್ರಸಾದ್ ಅವರು ವೇದಿಕೆಗೆ ಶ್ರೀ ಕೆ.ಎನ್. ಭಗವಾನ್ ಅವರನ್ನು ಸ್ವಾಗತಿಸಿ, ಅವರ ಕಿರುಪರಿಚಯವನ್ನು ಮಾಡಿದರು.

ಕುಮಾರ ವ್ಯಾಸನ ಕಾಲ, ಸ್ಥಳ, ದೇಶಭಾಷೀಯ ಕೃತಿಗಳಲ್ಲಿ ಕುಮಾರವ್ಯಾಸನ ಕರ್ನಾಟಕ ಭಾರತ ಕಥಾಮಂಜರಿ ಅಗ್ರಮಾನ್ಯವಾದುದು ಎಂಬ ಪೀಠಿಕೆಯೊಂದಿಗೆ ಆರಂಭಗೊಂಡ ಚರ್ಚೆ, ನಂತರ ಚರ್ಚಾಭಾಗವಾದ ಅರಣ್ಯಪರ್ವದಲ್ಲಿನ ಧರ್ಮವ್ಯಾಧನ ಕಥೆಯನ್ನು ಮಾರ್ಕಂಡೇಯ ಮುನಿಗಳು ಧರ್ಮರಾಯನಿಗೆ ಹೇಳುವ ಪ್ರಸಂಗದ ಕುರಿತಂತೆ ಕೆಲವು ಪದ್ಯಗಳನ್ನು ವಾಚಿಸಿದರು.

ನಾನಾ ಮುಖದ ಧರ್ಮಗಳು, ಕುಲಕಸಬು ಬಿಡದೆ ಪಾಲಿಸುವುದು ಧರ್ಮ, ಆಪದ್ಧರ್ಮ, ಕ್ಷತ್ರಿಯ ಧರ್ಮ, ಕ್ಷಾತ್ರಧರ್ಮ, ವಿಪ್ರಧರ್ಮಗಳೇನು, ಸದ್ಧರ್ಮಗಳಾವುವು. ಇವುಗಳನ್ನು ಉಲ್ಲೇಖಿಸಿ, ವ್ಯಾಧನು ವಿಪ್ರನಿಗೆ ಧರ್ಮ ಸೂಕ್ಷ್ಮತೆ ಬಗ್ಗೆ ವಿವರಿಸಿದ ಪ್ರಸಂಗಗಳ ಅವಶ್ಯಕತೆಯ ಔಚಿತ್ಯವೇನಿತ್ತು ಎಂಬುದರ ಬಗ್ಗೆ ಸಾಕಷ್ಟು ಚರ್ಚೆ ನಡೆಯಿತು. ಕುಮಾರವ್ಯಾಸ ಒಬ್ಬ ಸಂಪ್ರದಾಯವಾದಿ, ಜಾತಿಯಲ್ಲಿ ನಂಬಿಕೆ ಇರಿಸಿಕೊಂಡ ವ್ಯಕ್ತಿ, ವೈದಿಕ ಧರ್ಮದ ಚೌಕಟ್ಟಿನ ಪಾಲನೆ ಅವನ ಕರ್ತವ್ಯವಾಗಿತ್ತು ಮತ್ತು ಅವನ ದರ್ಶನ ಸೂಕ್ಷ್ಮತೆ ಕಾವ್ಯದಲ್ಲಿ ಎಲ್ಲೆಲ್ಲೂ ಎದ್ದು ಕಾಣುತ್ತದೆ ಎಂಬ ಅಭಿಪ್ರಾಯಗಳು ವ್ಯಕ್ತವಾಯಿತು.

ಶ್ರೀ ಬಿ.ಎಸ್.ಗುರುಪ್ರಸಾದ್ ಅವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮವು ಮುಕ್ತಾಯಗೊಂಡಿತು.

**ಕಿರುಪರಿಚಯ**

**ಶ್ರೀ ಕೆ.ಎನ್. ಭಗವಾನ್**

ಶ್ರೀ ಕೆ.ಎನ್. ಭಗವಾನ್ ಅವರು ಬೆಂಗಳೂರಿನ ವಿಮಾನ ಕಾರ್ಖಾನೆಯ ನಿವೃತ್ತ ಇಂಜನಿಯರ್.ತಮ್ಮ ವಿದ್ಯಾಭ್ಯಾಸದ ದಿನಗಳಲ್ಲೇ ಸಾಹಿತ್ಯದ ತುಡಿತ ಅವರ ಅಂತರಂಗದಲ್ಲಿ ಮಿಡಿಯುತ್ತಿತ್ತು. ಪ್ರೌಢ ಶಾಲೆಯ ವಿದ್ಯಾರ್ಥಿಯಾಗಿದ್ದಾಗಲೇ ತಮ್ಮ ಒಂದು ಕಥೆಗಾಗಿ ಬಹುಮಾನ ಪಡೆದ ಶ್ರೀಯುತರು, ಸಾರಸ್ವತ ಲೋಕಕ್ಕೆ ಪಾದಾರ್ಪಣ ಮಾಡಿದರು.೧೯೬೬ರಲ್ಲಿ ಪ್ರಜಾವಾಣಿಯ ಕಥಾ ಸ್ಪರ್ಧೆಯಲ್ಲಿ, ಇವರು ಬರೆದ 'ಎಡ ಹೊಳೆಯ ಹನುಮ' ಎಂಬ ಕಥೆಗೆ ಎರಡನೇ ಬಹುಮಾನ ಬಂದಿದೆ. ತಾವು ಬರವಣಿಗೆಯನ್ನು ರೂಢಿಸಿಕೊಂಡಿರುವುದಕ್ಕೆ ಅವರು ನೀಡುವ ಕಾರಣ ೧) ಪ್ರಬಂಧಗಳನ್ನು ಬರೆಯುವ ಹವ್ಯಾಸ ಮತ್ತು ಒಲವು ಹಾಗೂ ತಮ್ಮ ಅಧ್ಯಾಪಕರ ಪ್ರೇರೇಪಣೆ ಮತ್ತು ಅವರುಗಳು ನೀಡುತ್ತಿದ್ದ ಉತ್ತೇಜನ, ಶ್ರೀ ಭಗವಾನ್ ವೈವಿಧ್ಯಮಯ ಕೃತಿಗಳನ್ನು ರಚಿಸಿದ್ದಾರೆ-ಕಥೆಗಳು, ಕವಿತೆಗಳು, ವಿಜ್ಞಾನ ಬರಹಗಳು, ಕಥಾಸಂಕಲನಗಳು, ಕಥನ ಪ್ರಬಂಧ ಸಂಕಲನ. ಗ್ರಾಮೀಣ ಬದುಕಿನ ಚಿತ್ರಣ, ಸಾತ್ವಿಕ ಹಾಸ್ಯ, ಅನುಭವದ ನಿರೂಪಣಾ ಕ್ರಮ, ಶೈಲಿ, ಓದುಗರನ್ನು ಆಕರ್ಷಿಸುತ್ತದೆ. ತಮ್ಮ ಎಲ್ಲಾ ಪ್ರಬಂಧಗಳು, ಒಂದಲ್ಲಾ ಒಂದು ರೀತಿಯಲ್ಲಿ, ಭಾವ ಪ್ರಬಂಧಗಳೆಂದೇ ಇವರ ಭಾವನೆ.

## ೦೯-೦೯-೨೦೧೮

### ಶ್ರೀಮತಿ ಸಾವಿತ್ರಮ್ಮ-ಪ್ರೊ॥ ಎಂ.ವಿ.ಸೀತಾರಾಮಯ್ಯ ಸಾಹಿತ್ಯ ಪ್ರಶಸ್ತಿ ಪ್ರದಾನ

ಪ್ರಶಸ್ತಿ ಪ್ರದಾನ ಮತ್ತು ಅಧ್ಯಕ್ಷತೆ : ಡಾ॥ ಟಿ.ವಿ. ವೆಂಕಟಾಚಲ ಶಾಸ್ತ್ರೀ<br>ಪ್ರಖ್ಯಾತ ವಿದ್ವಾಂಸರು

ಪ್ರಶಸ್ತಿ ಪುರಸ್ಕತರು : ಶ್ರೀ ಸೀತಾರಾಮ ಜಾಗೀರ್‌ದಾರ್<br>ಪ್ರಖ್ಯಾತ ಶಾಸನತಜ್ಞರು



೯-೯-೨೦೧೮ ಈ ದಿನಾಂಕದ ವಿಶೇಷವೇನು? ಬಿಎಂಶ್ರೀ ಪ್ರತಿಷ್ಠಾನಕ್ಕೂ ಈ ದಿನಾಂಕಕ್ಕೂ ಏನು ನಂಟು? ತಲೆ ಕೆಡಿಸಿ ಕೊಳ್ಳಬೇಡಿ. ಬಿಎಂಶ್ರೀ ಅವರ ಶಿಷ್ಯರಾದ ಪ್ರೊ. ಎಂ.ವಿ.ಸೀತಾರಾಮಯ್ಯನವರ ಜನ್ಮದಿನಾಂಕ ೯-೯-೨೦೦೯ರಲ್ಲಿ ಎಂವಿಸೀ ಅವರ ಜನ್ಮಶತಮಾನೋತ್ಸವವನ್ನು ರವೀಂದ್ರ ಕಲಾಕ್ಷೇತ್ರದಲ್ಲಿ ಅದ್ದೂರಿಯಾಗಿ ಆಚರಿಸಿದ್ದನ್ನು ಮರೆಯಲಾದೀತೇ?

ಪ್ರತಿಷ್ಠಾನದ ಎಂವಿಸೀ ಸಭಾಂಗಣದಲ್ಲಿ ದಿನಾಂಕ: ೯-೯-೨೦೧೮ರಂದು ಎಂ.ವಿ.ಸೀ ಅವರ ೧೦೯ನೇ ವರ್ಷದ ಜನ್ಮದಿನಾಚರಣೆಯು, ಎಂವಿಸೀ ಅವರ ನೆನಪಿನಲ್ಲಿ ಅವರ ಕುಟುಂಬದವರು ಸೇರಿ ಸ್ಥಾಪಿಸಿರುವ 'ಶ್ರೀಮತಿ ಸಾವಿತ್ರಮ್ಮ-ಪ್ರೊ. ಎಂ.ವಿ.ಸೀ ಸಾಹಿತ್ಯ ಪುರಸ್ಕಾರ' ಸಮಾರಂಭದ ಮೂಲಕ ಆಚರಿಸಲಾಯಿತು.

ಈ ವರ್ಷ,ಹಿರಿಯ ಸಂಶೋಧಕರಾದ, ಶಾಸನಾಧ್ಯಯನದ ವಲಯದಲ್ಲಿ ಮತ್ತು ಕನ್ನಡ ವಿದ್ವತ್ ವಲಯದಲ್ಲಿ ತಮ್ಮ ಛಾಪನ್ನು ಮೂಡಿಸಿರುವ ಪ್ರೊ. ಸೀತಾರಾಂ ಜಾಗೀರ್‌ದಾರ್ ಅವರನ್ನು ಆಯ್ಕೆ ಸಮಿತಿಯೊಂದು, ಅವಿರೋಧವಾಗಿ ೧೬ನೇ ವರ್ಷದ 'ಎಂವಿಸೀ ಸಾಹಿತ್ಯ ಪುರಸ್ಕಾರಕ್ಕೆ ಆಯ್ಕೆ ಮಾಡಿತು.

ಡಾ.ಪಿ.ವಿ.ನಾರಾಯಣ ಅಧ್ಯಕ್ಷರ ಸ್ವಾಗತ ಮತ್ತು ಪ್ರಾಸ್ತಾವಿಕ ನುಡಿಗಳೊಂದಿಗೆ ಕಾರ್ಯಕ್ರಮಕ್ಕೆ ವಿದ್ಯುಕ್ತವಾಗಿ ಚಾಲನೆ ದೊರಕಿತು. ಹಿಂದಿನ ಹದಿನೈದು ವರ್ಷದಲ್ಲಿ ಪ್ರಶಸ್ತಿ ಬೆಳೆದು ಬಂದ ಹಂತಗಳು ಎಂವಿಸೀ ಕುಟುಂಬ ವರ್ಗದವರ ಕೊಡುಗೆ ಮತ್ತು ವಿವಿಧ ಕ್ಷೇತ್ರಗಳಲ್ಲಿ ಹಿಂದಿನ ಹದಿನೈದು ವರ್ಷ ಪುರಸ್ಕಾರ ಪಡೆದವರನ್ನೂ ಮತ್ತು ಅವರ ಕಾರ್ಯಕ್ಷೇತ್ರಗಳನ್ನೂ ನೆನಪಿಸಿಕೊಂಡು, ಒಂದು ಧನ್ಯತಾ ಭಾವ ಪಡೆದಂತಾಯಿತು ಎಂದು ತಿಳಿಸಿದರು.

ಡಾ. ವಿಜಯಾಸುಬ್ಬರಾಜ್ ಅವರು ಅಭಿನಂದನ ಪತ್ರ ವಾಚನ ಮಾಡಿದರು. ಪ್ರಶಸ್ತಿ ಪುರಸ್ಕೃತರಿಗೆ ನಗದು ರೂ.೩೦,೦೦೧/-ಗಳನ್ನು ನೀಡಿ ಗೌರವಿಸಲಾಯಿತು.

ಪ್ರಶಸ್ತಿ ಸ್ವೀಕರಿಸಿ ಮಾತನಾಡಿದ ಶ್ರೀ ಸೀತಾರಾಂ ಜಾಗೀರ್‌ದಾರ್ ಅವರು, ತಮ್ಮನ್ನು ಈ ಪ್ರಶಸ್ತಿಗಾಗಿ ಆಯ್ಕೆ ಮಾಡಿದ ಆಯ್ಕೆ ಸಮಿತಿಯ ಸದಸ್ಯರಿಗೆ

ವಂದನೆ ಸಲ್ಲಿಸಿದರು. ತಾವು ಪ್ರಸ್ತುತ ಕೈಗೊಂಡಿರುವ ಕೆಲವು ಸಂಶೋಧನೆಗಳ/ಕಾರ್ಯಗಳ ಬಗ್ಗೆ ಸಂಕ್ಷಿಪ್ತವಾಗಿ ವಿಷಯ ಹಂಚಿಕೊಂಡರು. ತಮ್ಮ ಇತ್ತೀಚಿನ ಅಧ್ಯಯನಗಳಿಂದ/ಸಂಶೋಧನೆಗಳಿಂದ ಪಂಪನ ಕಾರ್ಯಕ್ಷೇತ್ರವು ಈಗಿನ ತೆಲಂಗಾಣದಲ್ಲಿ ಬರುವ ಬೋಧನವೇಯೆಂದು ತಾವು ನಿರ್ಧರಿಸಿರುವುದಾಗಿ ತಿಳಿಸಿ ಮತ್ತು ಬೋದನದಲ್ಲೇ ಪಂಪನಿಗಾಗಿ ಒಂದು ಸ್ಮಾರಕವನ್ನು ನಿರ್ಮಿಸುವ ಕ್ರಿಯಾಯೋಜನೆ ಕೈಗೊಂಡಿರುವ ಬಗ್ಗೆ ತಾವೊಂದು ನಿಧಿಯನ್ನು ಸ್ಥಾಪಿಸಿರುವುದಾಗಿ ತಿಳಿಸಿದರು. ಈಗ ಸ್ವೀಕರಿಸಿರುವ ಪ್ರಶಸ್ತಿ ಮೊತ್ತವೂ ಆ ನಿಧಿಗೆ ಸಮರ್ಪಿಸಲಾಗುವುದೆಂದು ತಿಳಿಸಿದರು. ಈ ಸಮಾರಂಭದ ಉಪಯುಕ್ತತೆಯನ್ನು ಕಾಲೇಜಿನ ವಿದ್ಯಾರ್ಥಿಗಳು ಪಡೆಯಬಹುದಾಗಿತ್ತು, ಆದರೆ ಒಬ್ಬ ವಿದ್ಯಾರ್ಥಿಯೂ ಸಭೆಯಲ್ಲಿ ಇಲ್ಲದಿದ್ದನ್ನು ಕಂಡು ಬೇಸರ ವ್ಯಕ್ತಪಡಿಸಿದರು.

ಸಭೆಯ ಅಧ್ಯಕ್ಷತೆ ಮತ್ತು ಪುರಸ್ಕಾರ ಪ್ರದಾನ ಮಾಡಿದ ಪ್ರಖ್ಯಾತ ವಿದ್ವಾಂಸರಾದ ಡಾ.ಟಿ.ವಿ. ವೆಂಕಟಾಚಲ ಶಾಸ್ತ್ರೀಯವರು, ಪುರಸ್ಕಾರ ಸ್ವೀಕರಿಸಿದ ಶ್ರೀ ಸೀತಾರಾಂ ಜಾಗೀರ್‌ದಾರ್ ಅವರು ತಮ್ಮ ವಿದ್ಯಾರ್ಥಿಯೆಂದು ತಿಳಿಸಿ, ಸಂಶೋಧನಾ ಕ್ಷೇತ್ರದಲ್ಲಿ, ಶಾಸನಾಧ್ಯಯನ, ಗ್ರಂಥಸಂಪಾದನಾ ಶಾಸ್ತ್ರದಲ್ಲೂ ಅಪಾರ ಅನುಭವ ಮತ್ತು ಪರಿಶ್ರಮ ಹೊಂದಿದವರೆಂದು ತಿಳಿಸಿ, ಅವರ ಕೆಲವು ವಿದ್ವತ್ ಪೂರ್ಣ ಲೇಖನಗಳನ್ನು ನೆನಪಿಸಿಕೊಂಡರು. ಇಂತಹ ಮೇಧಾವಿ ಶಿಷ್ಯನಿಗೆ, ಎಂ.ವಿ.ಸೀ ಪುರಸ್ಕಾರ ನೀಡುವ ಅವಕಾಶ ಕಲ್ಪಿಸಿದ ಬಿಎಂಶ್ರೀ ಪ್ರತಿಷ್ಠಾನಕ್ಕೆ ಅಭಿನಂದಿಸಿದರು.

ಶ್ರೀ ಬಿ.ಆರ್.ರವೀಂದ್ರನಾಥ್ ಅವರು ವಂದನಾರ್ಪಣೆ ಸಲ್ಲಿಸಿದರು. ಶ್ರೀ ಬಿ.ಎಸ್. ಗುರುಪ್ರಸಾದ್ ಅವರು ಕಾರ್ಯಕ್ರಮದ ನಿರೂಪಣೆ ಮಾಡಿದರು.

## ೨೫-೦೮-೨೦೧೮

## ಶ್ರೀಮತಿ ರುಕ್ಮಿಣಮ್ಮ ಸೀತಾರಾಮರಾವ್ ದತ್ತಿ ಉಪನ್ಯಾಸ

ಉಪನ್ಯಾಸ : ಶ್ರೀ ಬಿ.ಎಸ್. ಗುರುಪ್ರಸಾದ್

ನಿವೃತ್ತ ಜೀವ ವಿಮಾ ಆಡಳಿತಾಧಿಕಾರಿಗಳು

ವಿಷಯ : ಚಾರಣ–ಆಕರ್ಷಣೆ ಮತ್ತು ಅಪಾಯಗಳು

ಡಾ|| ಪಿ.ವಿ.ನಾರಾಯಣ, ಅಧ್ಯಕ್ಷರು, ದತ್ತಿ ದಾನಿಗಳ ಕುಟುಂಬವರ್ಗದವರನ್ನು ಉಪನ್ಯಾಸಕರನ್ನು ಮತ್ತು ಸಭಿಕರನ್ನು ಕಾರ್ಯಕ್ರಮಕ್ಕೆ ಆಹ್ವಾನಿಸಿ, ನಂತರ ಪ್ರಸ್ತುತ ನಮ್ಮ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದ ಸಂಯೋಜನಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಉಪನ್ಯಾಸಕರನ್ನು ಸಭೆಗೆ ಪರಿಚಯ ಮಾಡಿದರು.

ಉಪನ್ಯಾಸದ ಕೆಲವು ಭಾಗಗಳು

ಚಾರಣ ಎಂಬ ಕ್ರೀಡೆಯು, ಪಂದ್ಯವಲ್ಲ. ಇದರಲ್ಲಿ ಸೋಲು, ಗೆಲುವಿನ ಪ್ರಶ್ನೆ ಉದ್ಭವಿಸುವುದಿಲ್ಲ. ಇದು ಆರೋಗ್ಯ ಸಂವರ್ಧನೆಯ ಕ್ರೀಡೆ.ಶರೀರದ ಎಲ್ಲಾ ಅಂಗಾಂಗಗಳೂ ಕಾರ್ಯನಿರತವಾಗಿದ್ದು, ಚಾರಣ ಮತ್ತು ಪ್ರವಾಸ ಜೀವನದಲ್ಲಿ ಖುಷಿ, ಅನೇಕ ಅನುಭವ ಮತ್ತು ಅರಿವಿನ ಪರಧಿಯನ್ನು ವಿಸ್ತರಿಸುವಂತಹ ಕ್ರೀಡೆಯಾಗಿದೆ. ಹಿಮಾಲಯ ಪರ್ವತ ಶ್ರೇಣಿಗಳಲ್ಲಿಯೂ, ಅಳಿಯದ ಆಕರ್ಷಣೆ– ಎಲ್ಲಾ ವಯಸ್ಸಿನವರಿಗೂ ಇರುತ್ತದೆ. ಚಾರಣಗಳಲ್ಲಿ ವಿವಿಧ ರೀತಿಯ ಚಾರಣಗಳೆಂದು ವಿಂಗಡಿಸಬಹುದೆಂದೂ ಅವುಗಳು :–

೧. ಪ್ರಾದೇಶಿಕವಾದ ಬೆಟ್ಟ ಗುಡ್ಡ, ನದಿ ತೀರ, ಅರಣ್ಯ ಪ್ರದೇಶಗಳಲ್ಲಿ ಚಾರಣ

೨. ಸಮುದ್ರ ತೀರದ ಚಾರಣ ಮತ್ತು

೩. ಹೆಚ್ಚು ಆಕರ್ಷಣೆಗೆ ಕಾರಣವಾಗಿರುವ ಹಿಮಾಲಯಪರ್ವತ ಪ್ರದೇಶಗಳ ಚಾರಣ




೪. ವಿದೇಶಗಳಲ್ಲಿ ಚಾರಣ ವೈವಿಧ್ಯಮಯ ಚಾರಣಗಳ ಬಗ್ಗೆ ವಿವರಿಸಿದರು. ನಾಲ್ಕು ರೀತಿಯ ಚಾರಣಗಳನ್ನು ಸಾಹಸಿಗರು ಕೈಗೊಳ್ಳುವ ಬಗ್ಗೆ ತಿಳಿಸಿ, ಚಾರಣ ಪೂರ್ವ ಸಿದ್ಧತೆ, ಬೇಕಾಗುವ ಪರವಾನಗಿ, ಪರಿಕರಗಳು, ಮುಂತಾದ ವಿಷಯಗಳ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಿದರು.

ಅರವತ್ತು ವರ್ಷಗಳ ಹಿಂದಿನಿಂದೀಚೆಗೆ, ಭಾರತದಲ್ಲಿ ಚಾರಣದ ಬಗ್ಗೆ ಅರಿವು ಮತ್ತು ತೀವ್ರವಾದ ಚಟುವಟಿಕೆಗಳನ್ನು ಗಮನಿಸುತ್ತಿರುವುದಾಗಿ ಚಾರಣದ ಬಗ್ಗೆ ಅರಿವು ಮೂಡಿಸುತ್ತಿರುವ YHAI(Youth Hostels Associaton of india) ಬೆಂಗಳೂರಿನ KMA,(Karnataka Mountaineeing Association) Spark, Army Adventure Foundation, ಹೀಗೆ ಹಲವಾರು ಸಂಸ್ಥೆಗಳ ಕಾರ್ಯಗಳು, ಕೊಡುಗೆಗಳು, ಚಾರಣೆಗೆ ಸೌಲಭ್ಯಗಳ ಬಗ್ಗೆ ತಿಳಿಸಿದರು.

ನಂತರ ಹಿಮಾಲಯ ಪರ್ವತಗಳ ಶ್ರೇಣಿಗಳಲ್ಲಿ ಕೈಗೊಳ್ಳುವ ಚಾರಣದ ಬಗ್ಗೆ ಮಾತನಾಡುತ್ತಾ, ಸಾಹಸಿಗರನ್ನೂ, ಚಿಂತಕರನ್ನೂ ಸಾಹಿತಿಗಳನ್ನೂ, ಆಧ್ಯಾತ್ಮ ಚಿಂತಕರನ್ನೂ, ಚಿತ್ರಗಾರರನ್ನೂ, ಕಲೆಗಾರರನ್ನೂ, ಇತಿಹಾಸಕಾರರನ್ನೂ, ಬೆಟ್ಟಗುಡ್ಡ ವಾಸಿಗಳ ಸಂಸ್ಕೃತಿ ಅಧ್ಯಯನ ಕಾರರನ್ನೂ, ಭೂವಿಜ್ಞಾನಿಗಳನ್ನೂ, ಮಾನವ ಶಾಸ್ತ್ರಜ್ಞರನ್ನೂ, ಹವಾಮಾನ ಪರಿಣತರನ್ನೂ, ಹೀಗೆ ಮುಂತಾದವರನ್ನೂ ತನ್ನ ಆಕರ್ಷಣೆಗೆ ಸೆಳೆಯುತ್ತಿರುವ ಬಗ್ಗೆ ಕೆಲವು ಉದಾಹರಣೆಗಳ ಮೂಲಕಮಾಹಿತಿ ನೀಡಿದರು. ನಂತರ ಹಿಮಾಲಯದ ಶ್ರೇಣಿಗಳನ್ನು ಭೌಗೋಳಿಕವಾಗಿಯೂ ಮತ್ತು ಎತ್ತರದ ಆಧಾರದ ಮೇಲೆ ವಿಗಂಡಿಸಿರುವ ರೀತಿಯನ್ನು ವಿವರಿಸಿದರು.

ಎತ್ತರದ ಪ್ರದೇಶವನ್ನು ಕ್ರಮಿಸುವಾಗ ಮುನ್ನೆಚ್ಚರಿಕೆ ಕ್ರಮಗಳ ಬಗ್ಗೆ ವಿವರಿಸಿ, ಗಾಳಿಯ ಒತ್ತಡದ ಕುಸಿಯುವಿಕೆಯಿಂದಲೂ ಮತ್ತು ಆಮ್ಲಜನಕದ ಇನೂರತೆಯಿಂದ ಗುಡ್ಡಗಾಡಿನ ವೈಪರೀತ್ಯಗಳು (High Altitude Mouintain sickness) ಬಗ್ಗೆ ವಿಷದವಾಗಿ ತಿಳಿಸಿ, ಕೆಲವು ತಂಡಗಳಲ್ಲಿ ಚಾರಣಿಗರು /ಪರ್ವತಾ ರೋಹಿಗಳು ಅನುಭವವನ್ನು ವಿವರಿಸಿದರು.

ಹಿಮಾಲಯದಲ್ಲಿ ಆಕರ್ಷಣೆಗೆ ಕೊರತೆಯುಂಟೇ? ಹಿಮಾಲಯದ ದೇವತೆಗಳು ವಾಸಿಸುವ ಸ್ಥಳವೆಂದೇ ನಮ್ಮ ಪುರಾಣಗಳು ಹೇಳಿದೆ. ಬ್ರಹ್ಮಾಂಡ ಪುರಾಣೋಕ್ತ ನದಿ, ಪರ್ವತ,ನದಿಗಳ ಉಗಮ ಸ್ಥಾನಗಳು, ಆಶ್ರಮಗಳು ಮುಂತಾದ ವಿವರವಿರುವ ಬಗ್ಗೆ ಹೇಳಿ ಹಿಮಾಚಲ ಪ್ರದೇಶದಲ್ಲಿರುವ 'ತ್ರಿಯುಗಿ' ನಾರಾಯಣ ದೇವಸ್ಥಾನದಲ್ಲಿ ರಾಮಾಯಣ–ಮಹಾಭಾರತ ಕಾಲದ ಯಜ್ಞಕುಂಡವನ್ನು ಇಂದಿಗೂ ಉರಿಸಿಕೊಂಡು ಬಂದಿರುವುದಾಗಿ ತಿಳಿಸಿದರು.

ನೈರುತ್ಯ ಹಿಮಾಲಯದ ಶ್ರೇಣಿಯಲ್ಲಿ ಚಾರಣವು ಬೌದ್ಧಮತಸ್ಥರಲ್ಲಿ ಬೆರೆತು ಅವರ ಆಚರಣೆ, ಸಂಸ್ಕೃತಿ ಮತ್ತು ವಿಚಾರಗಳನ್ನು ಡಾರ್ಜಲಿಂಗ್, ಕಲಿಂಪಾಂಗ್, ರೂಮೆಟೆಕ್, ಸಿಲಿಗುರಿ, ಕುರ್ಶಿಯಾಂಗ್, ಮುಂತಾದ ಸ್ಥಳಗಳಲ್ಲಿ ತಿಳಿಯಲು ಅವಕಾಶವಿರುವುದಾಗಿ ತಿಳಿಸಿದರು. ಸೌಂದರ್ಯ ಪ್ರಜ್ಞೆಯುಳ್ಳ ಕಲಾವಿದರಿಗೆ ಸೂಕ್ಷ್ಮ ಸಂವೇದನೆಯ ಕವಿಗಳಿಗೆ, ಕಲೆಗಾರರಿಗೆ, ಕಾದಂಬರಿಕಾರರಿಗೆ, ಸಂಗೀತ ತಜ್ಞರಿಗೆ, ನೃತ್ಯಕಾರರಿಗೆ, ನಾಟಕಕಾರರಿಗೆ, ಛಾಯಾಚಿತ್ರಕಾರರಿಗೆ, ತತ್ವಜ್ಞಾನಿಗಳಿಗೆ, ಚಿಂತಕರಿಗೆ, ಯೋಗಿಗಳಿಗೆ, ಮುಮುಕ್ಷುಗಳಿಗೆ, ಇಂಜನೀಯರ್‌ಗಳಿಗೆ, ವೈದ್ಯರಿಗೆ, ಸಂಶೋಧಕರಿಗೆ, ಸಂಗ್ರಹಾಲಯಗಳ ವೀಕ್ಷಕರಿಗೆ/ ಅಭ್ಯಾಸ ಮಾಡುವವರಿಗೆ ಜೀವನದ ಪ್ರತಿಯೊಂದು ರಂಗದ ಜನರ ಮನಸ್ಸನ್ನು ಹಿಮಾಲಯ ಆಕರ್ಷಿಸಿದೆ, ಆಕರ್ಷಿಸುತ್ತಿದೆ ಮತ್ತು ಮುಂದಿನ ಪೀಳಿಗೆಗೂ ಆಕರ್ಷಿಸುತ್ತಲೇ ಇರುತ್ತದೆ.

ಚಾರಣಿಗರಿಗೆ ತರಬೇತಿ ಕೊಡುವ ಕೆಲವು ಸಂಸ್ಥೆಗಳ ಹೆಸರು, ವಿಳಾಸಗಳ ಮಾಹಿತಿಯೊಂದಿಗೆ ತಮ್ಮ ಉಪನ್ಯಾಸವನ್ನು ಮುಕ್ತಾಯಗೊಳಸಿದರು.

ಡಾ. ವಿಜಯಾ ಸುಬ್ಬರಾಜ್ ಎಲ್ಲರಿಗೂ ವಂದನೆ ಸಲ್ಲಿಸಿದರು.

## ಸಾಹಿತ್ಯವಿಹಾರ–೬

೩೦–೮–೨೦೧೮ ರಂದು ಸಾಹಿತ್ಯವಿಹಾರ–೬ ಕಾರ್ಯಕ್ರಮದಲ್ಲಿ ಶ್ರೀಮತಿ ಮಾಲತಿ ಪಟ್ಟಣಶೆಟ್ಟಿ ಮತ್ತು ಶ್ರೀಮತಿ ನುಗ್ಗೇಹಳ್ಳಿ ಪಂಕಜ ಅವರ ಸಾಕ್ಷ್ಯಚಿತ್ರ ತೋರಿಸಲಾಯಿತು.




**ಪದ೧:** ವೇದಮಂತ್ರಗಳನ್ನು ಉಚ್ಚರಿಸುವ ಒಂದು ಬಗೆಯನ್ನು ಪದ ಎನ್ನುತ್ತಾರೆ. ವೇದಮಂತ್ರಗಳನ್ನು ಬಿಡಿಸಿ ಹೇಳುವ ಗ್ರಂಥವನ್ನು ಪದಪಾಠ ಎನ್ನುತ್ತಾರೆ.ಪದ ಎಂಬುದು ಶಬ್ದ ಎಂಬುದಕ್ಕೆ ಸಂವಾದಿಯಾಗಿ ವ್ಯಾಪಕವಾಗಿ ಬಳಕೆಯಲ್ಲಿದೆ. ಹಾಗೆಯೇ 'ಪದಕ್ರಮಕ' ಎಂದರೆ ವೇದದ ಪದ ಮತ್ತು ಕ್ರಮಪಾಠಗಳನ್ನು ಅಧ್ಯಯನ ಮಾಡುವವನು ಹಾಗೂ ತಿಳಿದಿರುವವನು ಎಂದರ್ಥ. 'ಪದಕ' ಎಂದ–ರೆ ವೇದಪಾಠವನ್ನು ಅಧ್ಯಯನ ಮಾಡುವವನು ಎಂದು. ವ್ಯಾಕರಣದ ಪ್ರಕಾರ 'ಪ್ರಯೋಗಕ್ಕೆ ಅರ್ಹವಾದ ಅರ್ಥವತ್ತಾದ ವರ್ಣಗಳು' ಪದ ಎನ್ನಿಸಿಕೊಳ್ಳುತ್ತದೆ; ಆದರೆ ವ್ಯಾಕರಣದಲ್ಲಿ "ಪ್ರಕೃತಿ ಪ್ರತ್ಯಯಂಗಳೆರಡುಂ ಕೂಡೆ ಪದಮಕ್ಕುಂ" ಎಂದು ಕೇಶಿರಾಜನೆಂಬ ಹದಿಮೂರನೆಯ ಶತಮಾನದ ವೈಯಾಕರಣಿ ಹೇಳುತ್ತಾನೆ. "ಹಲಗೆ ಬಳಪವ ಹಿಡಿಯದೊಂದಗ್ಗಳಿಕೆ ಪದವಿಟ್ಟಳುಪದೊಂದಗ್ಗಳಿಕೆ "ಎಂದು ಕುಮಾರವ್ಯಾಸ ಹೇಳಿಕೊಳ್ಳುವ ಮಾತು ಕಾವ್ಯವನ್ನು ತಾನು ಎಲ್ಲಿಯೂ ಅಳಿಸದೆ ಸರಾಗವಾಗಿ ಬರೆದುಕೊಂಡು ಹೋಗುತ್ತೇನೆಂದು ಹೆಮ್ಮೆಪಡುವಾಗ ಹೇಳುವ ಮಾತಿದು. ಹಳಗನ್ನಡ ಕಾವ್ಯಗಳಲ್ಲಿ, ವಿಶೇಷವಾಗಿ ಚಂಪೂ ಕಾವ್ಯಗಳ ವೃತ್ತಗಳಲ್ಲಿ ಅನೇಕ ಶಬ್ದಗಳು ಕೂಡಿ ದೀರ್ಘ ಸಮಾಸಗಳಾಗಿರುವುದುಂಟು. ಅಂಥದರ ಅರ್ಥ ಹೇಳಲು ಅಲ್ಲಿರುವ ವಿವಿಧ ಪದಗಳನ್ನು ಬಿಡಿಸಿ ಹೇಳುವ ರೂಢಿಯನ್ನು 'ಪದವಿಭಾಗ' ಅಥವಾ 'ಪದಚ್ಛೇದ' ಎನ್ನುತ್ತಾರೆ. 'ಪದಸಂಚಯ' ಎಂದರೆ ಶಬ್ದಗಳ ಸಮೂಹ; "ಕೆಟ್ಟುದು ಈಗಡೀಗಡಿನ ಕವಿವ್ರಜಕ್ಕೆ ಪದಸಂಚಯಂ" ಎಂದು ಪೊನ್ನನೆಂಬ ಹತ್ತನೆಯ ಶತಮಾನದಕವಿ ತನ್ನ 'ಶಾಂತಿಪುರಾಣ'ದಲ್ಲಿ ಹೇಳುತ್ತಾನೆ!ಈ ಪದಗಳ ಬಗೆಗಿನ ಶಾಸ್ತ್ರವೇ ಪದಾಗಮ; ಅದನ್ನು ತಿಳಿದವನೇ ಪದಾಗಮಜ್ಞ. ಪದಾರ್ಥ ಎಂಬುದು ಈಗ ವಸ್ತು ಎಂಬ ಅರ್ಥವನ್ನು ಪಡೆದಿದ್ದರೂ ಅದರಲ್ಲಿ 'ಪದ+ಅರ್ಥ' ಎಂಬೆರಡು ಶಬ್ದಗಳು ಸೇರಿ ಅಭಿಪ್ರಾಯ ಎಂಬುದನ್ನು ಸೂಚಿಸುತ್ತದೆ.ಪದಗಳಿಗೆ ಅರ್ಥಗಳನ್ನು ಸೂಚಿಸುವ ಗ್ರಂಥವೇ 'ಪದಕೋಶ' ಅಥವಾ ನಿಘಂಟು.'ಪದವಿದ್ಯೆ' ಎಂದರೆ ವ್ಯಾಕರಣ.

ಪದ ಎಂಬುದು ಹಾಡು ಎಂಬರ್ಥದಲ್ಲಿಯೂ ಕನ್ನಡದಲ್ಲಿ ಬಳಕೆಯಲ್ಲಿರುವ ಶಬ್ದ. 'ಒಂದು ಪದ ಹೇಳು' ಎಂದರೆ ಒಂದು ಹಾಡು ಹೇಳು ಎಂದರ್ಥ. ಹರಿದಾಸರ ಕೀರ್ತನೆಗಳನ್ನು ದಾಸರ ಪದಗಳು ಎಂದೇ ಕರೆಯುವ ರೂಢಿಯಿದೆ. ಹಾಡುವುದಕ್ಕೆಂದೇ ರಚಿತವಾದ ಕಾವ್ಯವನ್ನು ಹಿಂದೆ 'ಪದಕವಿತೆ' ಎನ್ನುತ್ತಿದ್ದರು. 'ಪದಗಾರ್ತಿ' ಎಂಬುದನ್ನು ಹಾಡು ಹೇಳುವವಳು ಎಂಬರ್ಥದಲ್ಲಿ ಕಾವ್ಯಗಳಲ್ಲಿ ಬಳಸಲಾಗಿದೆ. ಗೀತರಚನೆಯಲ್ಲಿನ ಒಂದು ವಿಶಿಷ್ಟ ಪ್ರಭೇದವನ್ನೂ ಪದ ಎಂದು ಕರೆಯುತ್ತಾರೆ: ಶೃಂಗಾರಪ್ರಧಾನವಾಗಿದ್ದು, ದೇವರ ಲೀಲಾವಿನೋದಗಳನ್ನು ಒಳಗೊಂಡು ಭರತನಾಟ್ಯಕ್ಕೆ ಮೀಸಲಾದ ಸಾಹಿತ್ಯರಚನೆಗಳೇ ಈ ಪದಗಳು, ಜಾವಳಿ ಮುಂತಾದವು.

ಪದ ಎಂಬುದಕ್ಕೆ ಇನ್ನೊಂದು ನೆಲೆಯ ಅರ್ಥವ್ಯಾಪಕತೆಯಿದೆ; ಅದರದ್ದು ಮುಂದಿನ ಸರದಿ.

=====

**ಪದ೨:** ಈ ಶಬ್ದದ ಮತ್ತೊಂದು ನೆಲೆಯ ಅರ್ಥಗಳನ್ನೀಗ ನೋಡೋಣ. ಇದರ ಮೂಲಪದ 'ಪದ್' ಎಂಬುದು, ಅದರರ್ಥ ಪಾದ, ಚರಣ, ಕಾಲು ಎಂದು.ಪದ ಎಂದರೂ ಅದೇ ಅರ್ಥಗಳಿವೆ. ಹಾಗೆಯೇ ಕಾಲಿನ ಹೆಜ್ಜೆ, ಅಡಿ ಎಂಬ ಅರ್ಥಗಳೂ ಇವೆ. ಪಾದ ಎಂಬುದು ಈ ಶಬ್ದದ ಸಮಾನಾರ್ಥಕ ಪದ.ಕಾಲಿಗೆ ಸಂಬಂಧಿಸಿದುದು ಎಂದು ಸೂಚಿಸಲು ಇದನ್ನು ಪೂರ್ವಪದವಾಗುಳ್ಳ ಅನೇಕ ಸಮಾಸಗಳು ರೂಢಿಯಲ್ಲಿವೆ. ಪದಾತಿ ಅಥವಾ ಪದಾಜಿ ಎಂಬುದು ಚತುರಂಗ ಸೈನ್ಯದ ಕಾಲಾಳು ದಳವನ್ನು ಸೂಚಿಸುತ್ತದೆ.ಪದಪದ್ಧತಿ, ಪದನ್ಯಾಸಗಳು ಹೆಜ್ಜೆಯ ಗುರುತನ್ನು ಸೂಚಿಸುತ್ತವೆ. ಪದಕಟಕ ಎಂಬ ಶಬ್ದವನ್ನು ಷಡಕ್ಷರ ಕವಿ ಕಾಲ್ಗಡಗ ಎಂಬರ್ಥದಲ್ಲಿ ಬಳಸಿದ್ದಾನೆ. ಪದಪೀಠ ಎಂಬ ಶಬ್ದವು ಪಾದಗಳನ್ನಿರಿಸಿಕೊಳ್ಳಲು ಬಳಸುತ್ತಿದ್ದ ಪೀಠವನ್ನು ಸೂಚಿಸುತ್ತದೆ.ಪದ್ಯ ಎಂಬ ಶಬ್ದವು ಪದದಿಂದಲೇ ಬಂದುದು.ಇದಕ್ಕೆ ಸಂಸ್ಕೃತ ನಿಘಂಟುಗಳು ಎರಡು ಅರ್ಥಗಳನ್ನು ಹೇಳುತ್ತವೆ. ದೇವರ ಪಾದದಿಂದ ಹುಟ್ಟಿದ ನಾಲ್ಕನೆಯ ವರ್ಣದವನು ಎಂಬುದು ಒಂದು ಅರ್ಥವಾದರೆ ನಾಲ್ಕು ಪಾದಗಳುಳ್ಳ ಶ್ಲೋಕ ಎಂಬುದು ಮತ್ತೊಂದು.

ಪದ ಎಂಬುದು ಛಂದಶ್ಶಾಸ್ತ್ರದಲ್ಲಿಯೂ ಬಳಕೆಯಲ್ಲಿರುವ ಶಬ್ದ. ಛಂದ ಎಂದರೇ ನಡಿಗೆ; ನಡಿಗೆಯಲ್ಲಿ ಪಾದಗಳದ್ದೇ ಮುಖ್ಯ ಪಾತ್ರ.ಛಂದಸ್ಸು ಎಂಬುದು ಪದ್ಯಗಳ ನಡೆಯನ್ನು, ಪದ ಎಂಬುದು ಅಲ್ಲಿನ ಸಾಲನ್ನು ಸೂಚಿಸುತ್ತದೆ. ಸಂಸ್ಕೃತದ ಅನುಷ್ಟುಬ್ ಅಥವಾ ಶ್ಲೋಕದ ನಾಲ್ಕನೇ ಒಂದು ಭಾಗವನ್ನು ಪದ ಎಂದು ಕ–ರೆಯುತ್ತಾರೆ; ಶ್ಲೋಕಕ್ಕೆ ನಾಲ್ಕು ಸಾಲುಗಳು.ಮುಂದೆ ಯಾವುದೇ ಪದ್ಯಜಾತಿಯ ಸಾಲನ್ನು ಪದ ಎಂದೇ ಕರೆಯುವ ರೂಢಿ ಬಂತು.ಸರಸ್ವತಿ ಮತ್ತು ಕಾವ್ಯ ಎರಡನ್ನೂ ಕವಿರಾಜಮಾರ್ಗಕಾರನು "ಚತುರರುಚಿರ ಪದರಚನೆ" ಎಂದು ಶ್ಲೇಷೆಯಿಂದ ವರ್ಣಿಸುತ್ತಾನೆ. ಸರಸ್ವತಿಯ ಕಾಲು ಹಾಗೂ ಕಾವ್ಯದ ಪದ್ಯದ ಸಾಲು ಎರಡೂ ಅರ್ಥಗಳನ್ನಿದು ಒಳಗೊಂಡಿದೆ.

ಪದ ಎಂಬುದು ಸ್ಥಾನವನ್ನೂ ಸೂಚಿಸುತ್ತದೆ.ಪದವಿ ಎಂಬುದು ಇದರ ಇನ್ನೊಂದು ರೂಪ; ಇದಕ್ಕ ಮಾರ್ಗ ಹಾಗೂ ಸ್ಥಾನ ಎಂಬ ಅರ್ಥಗಳಿವೆ. ಪದಚ್ಯುತ ಎಂದರೆ ಸ್ಥಾನವನ್ನು ಕಳೆದುಕೊಂಡವನು ಎಂಬರ್ಥವಿದೆ. ಹಾಗೆಯೇ ಅಧಿಕಾರದಲ್ಲಿ ಮೇಲಿನ ಹಂತಕ್ಕೇರುವುದನ್ನು 'ಪದೋನ್ನತಿ' ಎಂಬ ಶಬ್ದದಿಂದ ಸೂಚಿಸುತ್ತಾರೆ.

## ಎಂವಿಸೀ – ಬದುಕು – ಒಂದು ನೋಟ–೩

––ಡಾ. ಪಿ.ವಿ. ನಾರಾಯಣ

ಚಿಕ್ಕವರಾಗಿದ್ದಾಗಿನಿಂದಲೂ ನೋಡುತ್ತಿದ್ದ ಕಂಪನಿ ನಾಟಕಗಳಿಂದ ಪ್ರೇರಿತರಾಗಿ ಸೀತಾರಾಮಯ್ಯನವರು ನಟನೆಯ ಬಗ್ಗೆಯೂ ಆಸಕ್ತಿ ತಾಳಿದ್ದರು. ಹೈಸ್ಕೂಲಿನಲ್ಲಿದ್ದಾಗ ಕೈಲಾಸಂ ಅವರ 'ಪೋಲಿಕಿಟ್ಟಿ' ನಾಟಕದಲ್ಲಿ ಪಾತ್ರ ವಹಿಸಿದ್ದರಂತೆ. ಜೂನಿಯರ್ ಇಂಟರ್‌ಮೀಡಿಯಟ್‌ನಲ್ಲಿದ್ದಾಗ ನಾ. ಕಸ್ತೂರಿ ಅವರ ಆಶುನಾಟಕ 'ವರಪರೀಕ್ಷೆ'ಯಲ್ಲಿ ಎಂವಿಸೀ ವಧುವಿನ ಪಾತ್ರಧಾರಿ; ಆಮೇಲೆ 'ಅಷಾಢಭೂತಿ' ನಾಟಕದಲ್ಲಿ ಲಲಿತೆಯ ಪಾತ್ರ. –ಹೀಗೆ ಸ್ತ್ರೀಪಾತ್ರಗಳಲ್ಲಿ ಇವರು ಮಿಗಿಲೆನಿಸಿದರು. ಅವರ ನಟನಕಲೆಯನ್ನು ಹಿರಿಕಿರಿಯರೆಲ್ಲ ಮೆಚ್ಚಿಕೊಂಡಿದ್ದರು.'ಅಷಾಢಭೂತಿ' ನಾಟಕದ ಇವರ ಪಾತ್ರವನ್ನು ಮೆಚ್ಚಿಕೊಂಡಿದ್ದ ವಿಶ್ವವಿದ್ಯಾನಿಲಯದ ಉಪಕುಲಪತಿ ಎನ್.ಎಸ್. ಸುಬ್ಬರಾಯರು ಮುಂದೆ ಇವರನ್ನು ಆ ಪಾತ್ರದ ಮೂಲಕ ಗುರುತಿಸುತ್ತಿದ್ದರಂತೆ! ಆ ಕಾಲದಲ್ಲಿಯೇ ಸೀತಾರಾಮಯ್ಯನವರಿಗೆ ಮುಂದೆ ರಂಗದಿಗ್ಗಜರೆನಿಸಿದ ಬಿ. ಕೃಷ್ಣ, ಸಿ.ಬಿ. ಜಯರಾವ್, ನಟೇಶ್, ಪರ್ವತವಾಣಿ ಮುಂತಾದವರ ಪರಿಚಯ ಲಾಭ ದೊರೆತಿತ್ತು. ಪ್ರಾಯಶಃ ಈ ರಂಗಹಿನ್ನೆಲೆಯೇ ಎಂವಿಸೀ ಮುಂದೆ ಕೆಲವು ನಾಟಕಗಳನ್ನು ರಚಿಸಲೂ ಹಿನ್ನೆಲೆಯೊದಗಿಸಿರಬೇಕು.

**ಉದ್ಯೋಗಪರ್ವ**

ಹೀಗೆ ಒಂದೆಡೆ ಸಾಂಪ್ರದಾಯಿಕ ಶಿಕ್ಷಣ, ಜೊತೆಜೊತೆಗೇ ವಿವಿಧ ಕಲೆಗಳ ಅಭ್ಯಾಸ ಇವುಗಳು ಸಮಾನಾಂತರವಾಗಿ ಸೀತಾರಾಮಯ್ಯನವರ ವ್ಯಕ್ತಿತ್ವವನ್ನು ಬಹುಮುಖಿಯಾಗಿಸಿತು. ಎಂ.ಎ. ಪಾಸಾದ ಮೇಲೆ ಶಾಂತಿನಿಕೇತನಕ್ಕೆ ಹೋಗುವ ಪ್ರಯತ್ನ ನಿಂತಾಗ ನೌಕರಿ ಹುಡುಕುವ ಕಡೆ ಇವರ ಮನಸ್ಸು ಹೋಯಿತು. ಮನೆಯಲ್ಲಿನ ಪರಿಸ್ಥಿತಿಯೂ ಇದಕ್ಕೆ ಕಾರಣ. ತಂದೆಯ ಸೀಮಿತ ಆದಾಯ ಕುಟುಂಬದ ವೆಚ್ಚಗಳನ್ನೆಲ್ಲ ಸರಿತೂಗಿಸುವುದಕ್ಕೆ ಸಾಕಾಗುತ್ತಿರಲಿಲ್ಲ. ಮನೆಯಲ್ಲಿ 10–12 ಮಂದಿಯಿದ್ದರು; ಜೊತೆಗೆ ಮನೆಯಲ್ಲಿ ಭಿಕ್ಷಾನ್ನಕ್ಕೆ, ವಾರಾನ್ನಕ್ಕೆ ಬರುತ್ತಿದ್ದ ಇತರ ವಿದ್ಯಾರ್ಥಿಗಳು; ಹೀಗೆ ವೆಚ್ಚ ಏರುಮುಖವಾಗಿತ್ತು. **ಮುಂದುವರಿಯುವುದು.**

# ಪ್ರತಿಷ್ಠಾನವನ್ನು ಸಮರ್ಥವಾಗಿ ಮುನ್ನಡೆಸಿದ ಕ್ರಿಯಾಶೀಲ ಅಧ್ಯಕ್ಷ ಡಾ. ಪಿ. ವಿ ನಾರಾಯಣ

–ಡಾ.ಆರ್. ಲಕ್ಷ್ಮೀನಾರಾಯಣ

ಎರಡು ಅವಧಿಗಳಿಗೂ ಮೀರಿ ಬಿ.ಎಂಶ್ರೀ ಪ್ರತಿಷ್ಠಾನದ ಅಧ್ಯಕ್ಷರಾಗಿ ಅನೇಕ ಅರ್ಥಪೂರ್ಣ ಮತ್ತು ವಿಶಿಷ್ಟ ಯೋಜನೆಗಳನ್ನು ರೂಪಿಸಿ ಅವನ್ನು ಯಶಸ್ವಿಯಾಗಿ ಕಾರ್ಯಗತಗೊಳಿಸುವ ಮೂಲಕ ಡಾ. ಪಿ.ವಿ. ನಾರಾಯಣ ಅವರು ಪ್ರತಿಷ್ಠಾನಕ್ಕೆ ಸಲ್ಲಿಸಿರುವ ಸೇವೆ ಅಮೋಘ, ಅವಿಸ್ಮರಣೀಯ. ಬಿ. ಎಂ.ಶ್ರೀ ಅವರ ಮೊಮ್ಮಗಳು ಶ್ರೀಮತಿ ಕಮಲಿನಿ ಬಾಲುರಾವ್ ಅವರ ಉದಾರ ಕೊಡುಗೆಯಿಂದಾಗಿ ಪ್ರತಿಷ್ಠಾನದ ಭೌತಿಕ ಸ್ವರೂಪಕ್ಕೂ ಒಂದು ಹೊಸ ರೂಪು ನೀಡುವಲ್ಲಿ ನಾರಾಯಣ ಅವರ ಪಾತ್ರ ತುಂಬ ಮಹತ್ವದ್ದು. ಇದೀಗ ಅಧ್ಯಕ್ಷಸ್ಥಾನದಿಂದ ನಿವೃತ್ತಿ ಪಡೆದಿರುವ(ಸೆಪ್ಟೆಂಬರ್ ೧೫) ಸಂದರ್ಭದಲ್ಲಿ ಅವರ ವ್ಯಕ್ತಿತ್ವ ಮತ್ತು ಸಾಹಿತ್ಯಗಳನ್ನು ಕುರಿತಂತೆ ಒಂದು ವಿಹಂಗಮ ನೋಟ.

ಕನ್ನಡ ಸಾಹಿತ್ಯಚರಿತ್ರೆಯಲ್ಲಿ ಹತ್ತುಸಾವಿರ ವಾರ್ಧಕ ಷಟ್ಪದಿಗಳನ್ನೊಳಗೊಂಡ ರಾಮಾಯಣ ಕಾವ್ಯವೇ ಅಲ್ಲದೆ ಇನ್ನೂ ಹಲವಾರು ಕನ್ನಡ ಸಂಸ್ಕೃತ ಕೃತಿಗಳ ಕರ್ತೃವೆಂದು ಖ್ಯಾತನಾದ, ಅದ್ವಿತೀಯ ವಿದ್ವಾಂಸ ಕವಿ ವೆಂಕಾಮಾತ್ಯನ ವಂಶಸ್ಥರಾದ ಡಾ. ಪ್ರಧಾನ್ ವೆಂಕಪ್ಪಯ್ಯ ನಾರಾಯಣ (ಪಿ.ವಿ ನಾರಾಯಣ) ಅವರು ಅವನ ಪಾಂಡಿತ್ಯ ಪ್ರತಿಭೆಗಳ ಸಮರ್ಥ ಮುಂದುವರಿಕೆಯೆಂಬಂತೆ ಶ್ರೇಷ್ಠ ಮಟ್ಟದ ವಿದ್ವಾಂಸರಾಗಿ, ವಾಗ್ಮಿಯಾಗಿ, ಸಂಶೋಧಕರಾಗಿ ವಿಮರ್ಶಕರಾಗಿ ಕಾದಂಬರಿಕಾರರಾಗಿ ಕನ್ನಡವನ್ನು ಕಟ್ಟುವ ಕಾಯಕದಲ್ಲಿ ಕಳೆದ ಸರಿ–ಸುಮಾರು ಅರ್ಧಶತಮಾನದಿಂದ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡಿದ್ದು ಸಂಶೋಧನೆ, ವಿಮರ್ಶೆ, ಅನುವಾದ, ಸಂಪಾದನೆ ಮತ್ತು ಸೃಜನಶೀಲ ಕೃತಿಗಳೂ ಸೇರಿದಂತೆ ಐವತ್ತಕ್ಕೂ ಹೆಚ್ಚು ಕೃತಿಗಳನ್ನು ನೀಡಿದ್ದಾರೆ. ವಿದ್ವತ್ತಿನ ದಂತಗೋಪುರದಲ್ಲೇ ಸದಾ ಮುಳುಗಿರದೆ ಈ ವಿದ್ವಾಂಸರು ಕನ್ನಡಪರ ಹೋರಾಟಗಳಲ್ಲೂ ಸದಾ ಸಕ್ರಿಯವಾಗಿ ತೊಡಗಿಸಿಕೊಂಡಿರುವುದು ಅವರ ವ್ಯಕ್ತಿತ್ವಕ್ಕೊಂದು ವಿಶಿಷ್ಟ ಮೆರುಗನ್ನು ನೀಡಿದೆ. ಮೂಲತಃ ತುಮಕೂರು ಜಿಲ್ಲೆಯ ಕೊರಟಗೆರೆ ತಾಲ್ಲೂಕಿನ ಅಕ್ಕಿರಾಂ ಪುರದವರಾದ ನಾರಾಯಣ ಅವರು ಮೈಸೂರು ವಿಶ್ವವಿದ್ಯಾನಿಲಯದಿಂದ ಎಂ. ಎ. ಪದವಿ ಪಡೆದ ನಂತರದಲ್ಲಿ (೧೯೬೪) ಮೂರು ನಾಲ್ಕು ವರ್ಷ ಬೇರೆ ಬೇರೆ ಕಡೆ ಹೈಸ್ಕೂಲು ಕಾಲೇಜುಗಳಲ್ಲಿ ಕೆಲಸ ಮಾಡುತ್ತಿದ್ದು ೧೯೬೮ರಿಂದ ನಿವೃತ್ತರಾಗುವವರೆಗೆ(೨೦೦೦). ವಿಜಯಕಾಲೇಜಿನಲ್ಲಿ ಮೂವತ್ತೆರಡು ವರ್ಷಗಳ ವರೆಗೆ ವಿದ್ಯಾರ್ಥಿಗಳ ಅಚ್ಚುಮೆಚ್ಚಿನ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಲೇ ಇಂದಿನ ವರೆಗೂ ಬರವಣಿಗೆ, ಭಾಷಣ ಹೋರಾಟಗಳೂ ಸೇರಿದಂತೆ ಕನ್ನಡದ ಬಗೆಬಗೆಯ ಚಟುವಟಿಕೆಗಳಲ್ಲಿ ನಿರಂತರವಾಗಿ ತೊಡಗಿಸಿಕೊಂಡಿದ್ದಾರೆ.

ವಿಮರ್ಶೆ ಮತ್ತು ಸಂಶೋಧನೆಯಲ್ಲಿ ಒಲವುಳ್ಳ ಪಿ. ವಿ. ಎನ್ ಅವರು ತಮ್ಮ ಸಂಶೋಧನ ಪ್ರಬಂಧವಾದ–"ವಚನ ಸಾಹಿತ್ಯ–ಒಂದು ಸಾಂಸ್ಕೃತಿಕ ಅಧ್ಯಯನ"ದಲ್ಲಿ ವಚನಸಾಹಿತ್ಯದ ಮೂಲಚೂಲಗಳನ್ನು ಇಡಿಯಾಗಿ ಸಂಶೋಧನೆಗೆ ಒಳಗುಮಾಡಿದ್ದಾರೆ. ಇದಲ್ಲದೆ ವಚನ ಸಾಹಿತ್ಯ ಕುರಿತಂತೆ ಅವರು ಬರೆದಿರುವ 'ವಚನ ಪರಿಸರ', 'ವಚನ ಸಮಗ್ರ', 'ವಚನ ವ್ಯಾಸಂಗ'ವೇ ಮೊದಲಾದ ಎಂಟು ವಿದ್ವತ್ಪೂರ್ಣ ಲೇಖನ ಸಂಗ್ರಹಗಳನ್ನು(ಇವೆಲ್ಲ ಇತ್ತೀಚೆಗೆ ಸಪ್ನ ಬುಕ್ ಸ್ಟಾಲ್ ಪ್ರಕಟಿಸಿರುವ 'ವಚನ ಸಮಸ್ತ' ಎಂಬ ಹೆಬ್ಬೊತ್ತಿಗೆಯಲ್ಲಿ ಸಂಕಲಿತವಾಗಿವೆ) ನೋಡದೆ ಮುಂದೆ ಹೋಗಲು ಸಾಧ್ಯವೇ ಇಲ್ಲ ಎಂಬಂತೆ ಈ ಕ್ಷೇತ್ರದಲ್ಲಿ ಅವರ ಸಾಧನೆ ಇದೆ.

ಗ್ರಂಥ ಸಂಪಾದನಾಕ್ಷೇತ್ರದಲ್ಲೂ ವಿಶೇಷ ಒಲವಿರುವ ಪಿ. ವಿ. ಎನ್ ಅವರು 'ಬಸವ ಪುರಾಣ ಸಂಗ್ರಹ', 'ಕುಮುದೇಂದು ರಾಮಾಯಣ', 'ಶಾಂತಿನಾಥ–ಆಂಡಯ್ಯ ಸಂಪುಟ', ಪಂಪನ 'ಆದಿಪುರಾಣ' ಮತ್ತು 'ವಿಕ್ರಮಾರ್ಜುನ ವಿಜಯ' ಗಳ ಸಂಕ್ಷಿಪ್ತ ಆವೃತ್ತಿ , 'ಕುಮಾರವ್ಯಾಸಭಾರತ ಸಂಗ್ರಹ' ಮೊದಲಾದ ತಮ್ಮ ಸಂಪಾದಿತ ಕೃತಿಗಳಿಗೆ ಕನ್ನಡ ಪಂಡಿತ ಪರಂಪರೆಗೆ ತಕ್ಕಂತೆ ಕವಿ ಕಾವ್ಯ ವಿಚಾರಾದಿಗಳನ್ನು ಕುರಿತು ವಿಸ್ತಾರವೂ ಅಧ್ಯಯನಪೂರ್ಣವೂ ಬೋಧಪ್ರದವೂ ಆದ ಮುನ್ನುಡಿಗಳನ್ನು ಮತ್ತು ಕಠಿಣ ಪದಗಳ ನಿಘಂಟನ್ನು ಅಳವಡಿಸಿದ್ದಾರೆ.

ಅನುವಾದ ಕ್ಷೇತ್ರದಲ್ಲೂ ಇಷ್ಟೇ ಆಸಕ್ತಿಯುಳ್ಳ ನಾರಾಯಣ ಅವರು ಕಾದಂಬರಿ, ಸಣ್ಣ ಕತೆ, ನಾಟಕ, ಮಹಾಕಾವ್ಯ, ವೈಚಾರಿಕ ಬರಹಗಳ ಜೊತೆಗೆ ಹಳಗನ್ನಡದ ಕಾವ್ಯ ನಾಟಕಗಳನ್ನು ಹೊಸಗನ್ನಡಕ್ಕೆ ರೂಪಾಂತರಿಸಿರುವುದೂ ಸೇರಿದಂತೆ

ಸುಮಾರು ೧೬ ಕೃತಿಗಳನ್ನು ರಚಿಸಿದ್ದಾರೆ. ಇದರಲ್ಲಿ ವಿಶೇಷವಾಗಿ ಉಲ್ಲೇಖಿಸಬೇಕಾದ್ದು ಪಾಲ್ಕುರಿಕೆ ಸೋಮನಾಥನ 'ತೆಲುಗು ಬಸವಪುರಾಣ'ದ, ಮೂಲಕ್ಕೆ ಹೊಯ್‌ಕಯ್ ಎನಿಸುವಂಥ ಅತ್ಯಂತ ಸುಂದರವಾದ ಕಾವ್ಯಾತ್ಮಕ ಅನುವಾದವನ್ನು. ಇದು ಪಿ. ವಿ. ಎನ್ ಅವರ ಒಂದು ವಿದ್ವತ್ ಸಾಹಸವೇ ಸರಿ.

ಇದರ ಜೊತೆಗೆ ಇಂಗ್ಲಿಷಿನಿಂದ ಖ್ಯಾತ ವಿಚಾರವಾದಿ ಬರ್ಟ್ರೆಂಡ್ ರಸೆಲ್‌ನ 'ಮದುವೆ ಮತ್ತು ನೀತಿ', 'ಸಮಾಜದ ಮೇಲೆ ವಿಜ್ಞಾನದ ಪ್ರಭಾವ, ಮತ್ತು 'ಅಧಿಕಾರ ಮೀಮಾಂಸೆ', ಷೇಕ್ಸ್‌ಪಿಯರನ 'ಹನ್ನೆರಡನೇ ರಾತ್ರಿ', ಹಾಗೂ ಅರಿಸ್ಟೋಫೇನೀಸನ ಎರಡು ನಾಟಕಗಳು ಚಾರ್ಲ್ಸ್ ಲ್ಯಾಂಬ್‌ನ 'ಟೇಲ್ಸ್ ಫ್ರಂ ಷೇಕ್ಸ್‌ಪಿಯರ್' ಕೃತಿಯ ಕನ್ನಡ ರೂಪ. ಟಾಲ್ ಸ್ಟಾಯ್ ಕಥೆಗಳು, 'ವ್ಯೂಹ' ವೆಂಬ ಕಾದಂಬರಿ ಕೂಡ ಅವರ ಅನುವಾದಗಳಲ್ಲಿ ಸೇರಿವೆ. ಸೃಜನಶೀಲ ಪ್ರಕಾರವಾದ ನಾಟಕ, ವೈಚಾರಿಕ ಮೀಮಾಂಸೆ ಹಾಗೂ ಕಥನ ಗದ್ಯಗಳಿಗೆ ಮೂರು ಪ್ರತ್ಯೇಕ ಮಾದರಿಗಳೆನ್ನುವ ಹಾಗೆ ಈ ಅನುವಾದಗಳು ಇವೆ ಎಂದು ಹೇಳಿದರೆ ಸಾಕು.ರಸೆಲ್ಲನ ಕೃತಿಯ ಅನುವಾದಕ್ಕೆ ಅವರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪುಸ್ತಕ ಬಹುಮಾನ ಬಂದಿದೆ.

ಇಷ್ಟೇ ಮಹತ್ವದ ಆದರೆ ಈಚೆಗೆ ಅವರೇ ಮರೆತುಬಿಟ್ಟಂತಿರುವ ಇನ್ನೊಂದು ಬಹು ಮುಖ್ಯವಾದ ಕ್ಷೇತ್ರವೆಂದರೆ ಕಾದಂಬರಿ ಕ್ಷೇತ್ರದಲ್ಲಿಯ ಅವರ ಸಾಧನೆ.'ಸಾಮಾನ್ಯ', 'ಅಂತರ', 'ವಿಕಾಸ', 'ಶೋಧನೆ', 'ನಿರ್ಧಾರ', 'ಹೋರಾಟ', 'ಸಂದಿಗ್ಧ' 'ಪರಿಸ್ಥಿತಿ' ಮತ್ತು 'ಧರ್ಮಕಾರಣ' ಇವು ಸೃಜನಶೀಲ ಲೇಖಕ ಪಿ. ವಿ. ಎನ್. ಅವರು ತಮ್ಮ ಅನುಭವ ಶೋಧನೆಯ ಸಲುವಾಗಿ ರಚಿಸಿರುವ ೯ ಕಾದಂಬರಿಗಳು. "ಶೋಧನೆ ಅವರ ಅತ್ಯಂತ ಪ್ರಮುಖ, ಯಶಸ್ವೀ ಹಾಗೂ ಬಹಳ ಹಿಂದೆಯೇ 'ಸುಧಾ' ಕಾದಂಬರಿ ಸ್ಪರ್ಧೆಯ ಬಹುಮಾನ ಪಡೆದ ಕಾದಂಬರಿ.

ಹಳಗನ್ನಡ ಸಾಹಿತ್ಯಾಭ್ಯಾಸಿಗಳಿಗೆ ನೆರವಾಗಲು ಅವರು ರಚಿಸಿರುವ ಮೂರು ನಿಘಂಟುಗಳಾದ 'ಪಂಪನ ನುಡಿಗಣಿ', 'ಚಂಪೂ ನುಡಿಗನ್ನಡಿ', 'ಹಳಗನ್ನಡ ಪದಸಂಪದ' ಹಳಗನ್ನಡದಲ್ಲಿಯ ಅವರ ತಲಸ್ಪರ್ಶಿಯಾದ ಪಾಂಡಿತ್ಯ ಮತ್ತು ಪರಿಶ್ರಮಕ್ಕೆ ಸಾಕ್ಷಿಯಂತಿವೆ. 'ಪದಸಂಚಯ' ಪದಗಳ ವ್ಯುತ್ಪತ್ತಿ, ಅವುಗಳ ಮೂಲಚೂಲಗಳನ್ನು ಕುರಿತ ಚರಿತೆಯನ್ನು ಸ್ವಾರಸ್ಯವಾಗಿ ತೆರೆದಿಡುವ ಕೃತಿ.

ಎಪ್ಪತ್ತರ ಈ ಏರು ವಯಸ್ಸಿನಲ್ಲೂ ಅಧ್ಯಯನ, ಅಧ್ಯಾಪನ, ಬರವಣಿಗೆ, ಭಾಷಣಗಳಲ್ಲಿ ಸಕ್ರಿಯರಾಗಿರುವ ನಾರಾಯಣ ಅವರು ಇದೀಗ ಪ್ರತಿಷ್ಠಾನದಿಂದ ನಿವೃತ್ತಿ ಪಡೆದಿದ್ದು ಮುಂದಿನ ದಿನಗಳಲ್ಲಿ ಅವರ ಬರವಣಿಗೆ ಇನ್ನಷ್ಟು ಕ್ರಿಯಾಶೀಲವಾಗುತ್ತದೆಂಬುದು ಅವರನ್ನು ಬಲ್ಲವರಿಗೆಲ್ಲಾ ತಿಳಿದೇ ಇದೆ. ಈ ಹಿರಿಯರು ನೂರ್ಕಾಲ ಆರೋಗ್ಯದಿಂದಿದ್ದು ತಮ್ಮ ತಿಳಿವನ್ನು ಎಲ್ಲರಿಗೂ ಹಂಚುತ್ತಿರಲೆಂಬುದಷ್ಟೇ ನಮ್ಮೆಲ್ಲರ ಹಾರೈಕೆ.

## ೧-೪-೨೦೧೩ ರಿಂದ ೩೧-೩-೨೦೧೮ರಅವಧಿಯಲ್ಲಿ ಬಿಎಂಶ್ರೀ ಪ್ರತಿಷ್ಠಾನದಲ್ಲಿ ಕೈಗೊಂಡ ಹೊಸ ಚಟುವಟಿಕೆಗಳು

| | ಚಟುವಟಿಕೆ | ಅವಧಿ |
|---|---|---|
| ೧. | ಹೊಂಗನಸು ಮಾಸಿಕ ವಾರ್ತಾ ಪತ್ರ ಪ್ರಾರಂಭ | ಫೆಬ್ರವರಿ ೨೦೧೪ |
| ೨. | ಲೋಚನ ಹೊಸ ರೂಪ ಹಾಗೂ ಬದಲಾವಣೆಗಳು | ೨೦೧೬ |
| ೩. | ಪ್ರೊಜೆಕ್ಟರ್ ಅಳವಡಿಕೆ | ೧೮-೬-೨೦೧೫ |
| ೪. | ಲೀಫ್ಟ್ ಅಳವಡಿಕೆ | ೧೦-೧-೨೦೧೭ |
| ೫. | ಹವಾ ನಿಯಂತ್ರಕಗಳ ಅಳವಡಿಕೆ | ೪-೪-೨೦೧೭ |
| ೬. | ಶಾ. ಬಾಲೂರಾವ ಮಾತಿನ ಮನೆ ಸ್ಥಾಪನೆ | ೧-೭-೨೦೧೫ |
| ೭. | ಗ್ರಂಥಾಲಯ ಪುನರ್ ವಿಂಗಡನೆ | ೨-೯-೨೦೧೭ |
| ೮. | ವಚನ ವಿಹಾರಚಿತ್ರ ಪ್ರದರ್ಶನ ಸರಣಿ | ೨೯-೬-೨೦೧೫ |
| ೯. | ರಂಗ ಸಂವಾದ ಕಾರ್ಯಕ್ರಮ ಸರಣಿ | ೨೭-೮-೨೦೧೬ |
| ೧೦. | ಕೃತಿಚಿತ್ರ ಕಾರ್ಯಕ್ರಮ ಸರಣಿ | ೫-೬-೨೦೧೬ |
| ೧೧. | ಸಾಹಿತ್ಯ ವಿಹಾರಕಾರ್ಯಕ್ರಮ ಸರಣಿ | ೨೧-೩-೨೦೧೮ |
| ೧೨. | ಶ್ರೀ ಸಾಹಿತ್ಯ ಹಾಗೂ ಇತರ ಹೊಸ ಪ್ರಶಸ್ತಿಗಳು | ೨೩-೩-೨೦೧೪ |
| | ಸೂ.ವೆಂ.ಆರಗ | ೨೬-೫-೨೦೧೨ |
| | ವಿಜಯಾ ಸುಬ್ಬರಾಜ್ ಗಣ್ಯ ಲೇಖಕಿ | ೨೧-೪-೨೦೧೪ |
| | ಶಾ. ಬಾಲೂರಾವ್ಅನುವಾದ & ಯುವಬರಹಗಾರ | ೧೪-೫-೨೦೧೪ |
| | ಪ್ರೊ.ಎಲ್.ಎಸ್. ಶೇಷಗಿರಿರಾವ್ ವಿಮರ್ಶಾ ಕೃತಿ | ೫-೧-೨೦೧೭ |
| | ವಿ.ನಾಗರಾಜ್ ಸಮೂಹ ಮಾಧ್ಯಮ ಪ್ರಶಸ್ತಿ | ೧೩-೩-೨೦೧೭ |
| ೧೩. | ಹೊಸ ದತ್ತಿಗಳು | |
| | ಎಂ.ಕೆ. ಮೋಹನ್‌ದೇವ್ ಆಳ್ವ & | |
| | ಡಾ. ಎಂ. ಕೆ. ಶಶಿಕಲಾ ದತ್ತಿ | ೧೧-೧೨-೨೦೧೭(ಹೆಚ್ಚುವರಿ) |
| | ಡಾ. ಎಂ. ಎಲ್. ಲಲಿತಮ್ಮ | ೧೫-೭-೨೦೧೭ |
| | ಹಾಸ್ಯ ಬ್ರಹ್ಮ ಟ್ರಸ್ಟ್ | ೧೫-೧೧-೨೦೧೭ |
| ೧೪. | ಜಾಲತಾಣ ನವೀಕರಣ | ಮೇ ೨೦೧೫ |
| ೧೫. | ಹುಟ್ಟು ಹಬ್ಬದ ಶುಭಾಶಯಗಳನ್ನು ಕಳುಹಿಸುವ ಪದ್ಧತಿ ಪ್ರಾರಂಭ | ೧-೩-೨೦೧೬ |
| ೧೬. | ಕನ್ನಡ ಸಂಸ್ಕೃತಿದರ್ಶನ ಸಾಕ್ಷ್ಯಚಿತ್ರ ಪ್ರದರ್ಶನ ಸರಣಿ | ೧೫-೪-೨೦೧೫ |
| ೧೭. | ಹಳಗನ್ನಡ ತರಗತಿಗಳು | ೨೬-೨-೨೦೧೬ |
| ೧೮. | ಎಂ.ಫಿಲ್ ಮತ್ತು ಪಿಎಚ್.ಡಿ | ೨೦೦೩, ೨೦೦೪ನೇ ಸಾಲು |
| ೧೯. | ಉಚಿತ ಪುಸ್ತಕ ವಿತರಣೆ ಪದ್ಧತಿ ಪ್ರಾರಂಭ | ೪-೬-೨೦೧೭ |
| ೨೦. | ಶಾಶ್ವತ ನಿಧಿ ಪುನರ್ ಪ್ರಾರಂಭ | ೧-೨-೨೦೧೫ |
| ೨೧. | ಉಪನಿಯಮಗಳ ತಿದ್ದುಪಡಿಗಳು | ೨೦೧೪-೨೦೧೮ |
| ೨೨. | ಚುನಾವಣಾ ನಿಯಮಗಳನ್ನು ರೂಪಿಸಿರುವುದು | ೨೦೧೮ |
| ೨೩. | ಗಮಕವಾಹಿನಿ ಕಾರ್ಯಕ್ರಮ ಸರಣಿ | ೩-೨-೨೦೧೬ |
| ೨೪. | ಗಮಕ ಕಲಾಪರಿಷತ್ತು | ೧-೩-೨೦೧೮ |

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2018-2020
dt. 27-10-2017
Office of Posting: Bangalore PSO, Bangalore 560026
Price :Annual Subscription Rs. 20/-
Date of publishing and Posting : 30-09-2018

### ಹಸ್ತಪ್ರತಿ ವಿಭಾಗದ ಮತ್ತು ಗ್ರಂಥಾಲಯ ವಿಭಾಗದ ವರದಿ.

ಇತ್ತೀಚೆಗೆ ಶ್ರೀ ಮದ್ವೀರಶೈವ ಶಿವಯೋಗ ಮಂದಿರ, ಬಾದಾಮಿ, ಬಾಗಲಕೋಟೆಗೆ ಭೇಟಿನೀಡಿದ್ದ ನಮ್ಮ ಸಂಯೋಜನಾಧಿಕಾರಿಗಳು, ಅಲ್ಲಿ ಹಸ್ತಪ್ರತಿಗಳ ಸಂರಕ್ಷಣಾ ಕಾರ್ಯವನ್ನು ಪ್ರತಿಷ್ಠಾನಕ್ಕೆ ವಹಿಸಿದರೆ, ತಾವು ಕಾರ್ಯವನ್ನು ಕೈಗೊಳ್ಳಲು ಸಿದ್ಧರಿರುವುದಾಗಿ ಅಲ್ಲಿನ ವ್ಯವಸ್ಥಾಪಕರಿಗೆ ಮನವರಿಕೆ ಮಾಡಿರುವುದಾಗಿ ತಿಳಿಸಿದರು.

ಗ್ರಂಥಾಲಯದಲ್ಲಿ ವಿದ್ವತ್ ಪೂರ್ಣ ನಿಯತಕಾಲಿಕೆಗಳನ್ನು ಪರಿಷ್ಕರಿಸಿ, ಪಟ್ಟಿ ಮಾಡಿ, ಸಂಪುಟ/ ಸಂಚಿಕೆವಾರು ಜೋಡಿಸಿಡುವ ಕಾರ್ಯ ಮುಕ್ತಾಯವಾಗಿದೆ.ಅಂತಹ ನಿಯತಕಾಲಿಕೆಗಳ ಪಟ್ಟಿಗಳನ್ನು (reference list) ಹುಡುಕಲು ಸಾಧ್ಯವಾಗುವ ರೀತಿಯಲ್ಲಿ ತಯಾರಿಸಲಾಗುತ್ತಿದೆ. ಈ ತಿಂಗಳಲ್ಲಿ ಕೆಲವು ಕಾಲೇಜಿನ ವಿದ್ಯಾರ್ಥಿಗಳು ಗ್ರಂಥಾಲಯದ ಉಪಯೋಗ ಪಡೆದಿದ್ದಾರೆ.

| | | |
|---|---|---|
| ೨೫. | ಇತಿಹಾಸ ಅಕಾಡೆಮಿ | ೧-೧೨-೨೦೧೭ |
| ೨೬. | ಹೂದನಿ ಭಾವಗೀತೆ ಧ್ವನಿ ಸುರಳಿ ಬಿಡುಗಡೆ | ೨೯-೪-೨೦೧೩ |
| ೨೭. | ಜಿ.ವಿ. ಶತಮಾನೋತ್ಸವ ಕಾರ್ಯಕ್ರಮ | ೨೬-೫-೨೦೧೩ |
| ೨೮. | ಉದಯಭಾನು ಕಲಾ ಸಂಘಕೆ ೧೦೦೧ ಗ್ರಂಥಗಳ ಕೊಡುಗೆ | ೧೪-೯-೨೦೧೩ |
| ೨೯. | ಪುಸ್ತಕ ದಾನ ಕಾರ್ಯಕ್ರಮಗಳು | ೧-೨-೨೦೧೫ |
| ೩೦. | ಹಸ್ತಪ್ರತಿಅಧ್ಯಯನ ಸಮಾವೇಶ | ೮-೧೧-೨೦೧೩ |
| ೩೧. | ಪಂಪಭಾರತ, ಸಂಕ್ಷಿಪ್ತ ವಿಕ್ರಮಾರ್ಜುನ ವಿಜಯ | ೨೩-೧೧-೨೦೧೩ |
| | ವಿಶೇಷ ತರಗತಿಗಳು | ೨೧-೪-೨೦೧೪ |
| ೩೨. | ಸಾಹಿತ್ಯ ಅಕಾಡೆಮಿವತಿಯಿಂದ ೮ ಗ್ರಂಥಗಳ ಪ್ರಕಟಣೆ | ೨೩-೬-೨೦೧೪ |
| ೩೩. | ಅಕ್ಕರಗೊಟ್ಟಿಕಾರ್ಯಕ್ರಮ ಸರಣಿ | ೧೩-೬-೨೦೧೫ |
| ೩೪. | ಕಟ್ಟಡ ನವೀಕರಣ ಹಾಗೂ ಕಾಮಗಾರಿ ಕೆಲಸಗಳು | ೨೦೧೫-೨೦೧೬ |
| ೩೫. | ವಾರ್ಷಿಕ ವರದಿಗಳಿಗೆ ಹೊಸ ರೂಪ | ೨೦೧೪-೨೦೧೮ |
| ೩೬. | ಕಾರ್ಯಕ್ರಮ ಹಾಜರಿ ಪುಸ್ತಕ | ೭-೧೨-೨೦೧೮ |
| ೩೭. | ಸಾಹಿತ್ಯ ಸಂಚಲನ ಕಾರ್ಯಕ್ರಮ ಸರಣಿ | ೧೮-೭-೨೦೧೮ |
| ೩೮. | ಆರ್ಥಿಕ ಸ್ಥಿತಿ ಉತ್ತಮಗೊಂಡಿರುವುದು | -- |

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ-ಅಂಚೆ

ಶ್ರೀಮತಿ/ಶ್ರೀ.............................................................................

.............................................................................

.............................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು - ೧೯
ದೂರವಾಣಿ : ೨೬೬೧೫೮೭೭